WPP-47

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೭ | ಬೆಂಗಳೂರು, ಗುರುವಾರ, ಮೇ ೩, ೨೦೧೨ (ವೈಶಾಖ ೧೩, ಶಕ ವರ್ಷ ೧೯೩೪) | ಸಂಚಿಕೆ ೧೮ |
| --- | --- | --- |

## ಭಾಗ–೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾಧಿಕಾರಿಗಳು, ಶಿರಸಿ ಉಪವಿಭಾಗ,**

**ಶಿರಸಿ ಇವರ ನಡವಳಿಕೆಗಳು**

**ವಿಷಯ:** ದಿ ತೋಟಗಾರ್ಸ್ ಕೋ–ಆಪರೇಟಿವ್ ಸೇಲ್ ಸೊಸೈಟಿ ಲಿಮಿಟೆಡ್., ಶಿರಸಿ ಇವರ ಅಮಲ್ಜಾರಿ ಪ್ರಕರಣ ಸಂಖ್ಯೆ ಸಿ.ಇ.ಪಿ59/2010–11ಕ್ಕೆ ಸಂಬಂಧಪಟ್ಟಂತೆ ಸ್ಥಿರಾಸ್ತಿಯನ್ನು 1960ನೇ ಸಹಕಾರ ಸಂಘಗಳ ನಿಯಮಗಳು ನಿಯಮ 38(5)(ಎ) ರನ್ವಯ ಮಾರಾಟ ಸ್ಥಿರೀಕರಣಗೊಳಿಸುವ ಬಗ್ಗೆ.

**ಉಲ್ಲೇಖ:** (1) ದಾವಾ ಸಂಖ್ಯೆ:.ಡಿಆರ್.ಎನ್/ಎಫ್/ಡಿಡಿಎಸ್/1490/2009–10

(2) ಅಮಲ್ಜಾರಿ ಸಂಖ್ಯೆ: ಸಿ.ಇ.ಪಿ. 59/2010–11

(3) ಮಾರಾಟಾಧಿಕಾರಿಗಳ ವರದಿ ದಿನಾಂಕ: 19–09–2011

ದಿ ತೋಟಗಾರ್ಸ್ ಕೋ–ಆಪರೇಟಿವ್ ಸೇಲ್ ಸೊಸೈಟಿ ಲಿಮಿಟೆಡ್.,ಶಿರಸಿ (ಉ.ಕ.) ................. ಅವಾರ್ಡುದಾರ

– ವಿರುದ್ಧ–

ಶ್ರೀ ಅನಂತ ನಾರಾಯಣ ಗದ್ದೇಮನೆ ................ ತೀರ್ಪುಬಾಕಿದಾರ

**ಪ್ರಸ್ತಾವನೆ:–**

ಶ್ರೀ ಅನಂತ ನಾರಾಯಣ ಗದ್ದೇಮನೆ, ಮೆ॥ ವೆಂಕಟೇಶ ಟ್ರೇಡರ್ಸ, ಗ್ರಾಮ ಶಿರಸಿ, ತಾ:ಶಿರಸಿ ಇವರು ದಿ ತೋಟಗಾರ್ಸ್ ಕೋ–ಆಪರೇಟಿವ್ ಸೇಲ್ ಸೊಸೈಟಿ ಲಿಮಿಟೆಡ್.,ಶಿರಸಿ (ಉ.ಕ.) ಇದರ ಪ್ರಧಾನ ಕಛೇರಿಯಿಂದ ದಿನಾಂಕ:09–05–2011 ರಂದು ರೂ.20,36,000/– (ರೂ ಇಪ್ಪತ್ತು ಲಕ್ಷದ ಮೂವತ್ತಾರು ಸಾವಿರಗಳು ಮಾತ್ರ) ಗಳನ್ನು ಖರೀದಿದಾರರ ಮುಂಗಡವಾಗಿ ಪಡೆದಿದ್ದು, ಸದರ್ ಸಾಲವನ್ನು ಮರುಪಾವತಿಸಲು ವಿಫಲರಾಗಿ ಸುಸ್ತಿದಾರರಾದ ಕಾರಣ ಸಾಲ ವಸೂಲಾತಿಗಾಗಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಅಡಿಯಲ್ಲಿ ಗೌರವ ಮಧ್ಯಸ್ಥಗಾರರು, ಸಹಕಾರ ಸಂಘಗಳು ಇವರ ನ್ಯಾಯಾಲಯದಿಂದ ಪಡೆದ ದಾವಾ ಕ್ರಮ ಸಂಖ್ಯೆ. ಡಿಆರ್.ಎನ್/ಎಫ್/ಡಿಡಿಎಸ್/1490/2009–10 ಆದೇಶ ದನ್ವಯ ದಿ ತೋಟಗಾರ್ಸ್ ಕೋ–ಆಪರೇಟಿವ್ ಸೇಲ್ ಸೊಸೈಟಿ ಲಿಮಿಟೆಡ್ ಶಿರಸಿ (ಉ.ಕ.) ಇದರ ಪ್ರಧಾನ ವ್ಯವಸ್ಥಾಪಕರು, ಕರ್ನಾಟಕ ಸಹಕಾರ ಸಂಘಗಳ ನಿಯಮಗಳ ಅಡಿ ಈ ಕಛೇರಿಯಲ್ಲಿ ಅಮಲ ಬಜಾವಣೆಗೆ ದಾಖಲ್ ಮಾಡಿದ್ದು ಅಮಲ್ಜಾರಿ ಪ್ರಕರಣ ನಂಬರ್ ಸಿ ಇ ಪಿ 59/2010–11 ರನ್ವಯ ದಾಖಲಾದಂತೆ ಮುಂದಿನ ವಸೂಲಿ ಕ್ರಮದ ಬಗ್ಗೆ ಅಮಲ್ಜಾರಿ ಪ್ರಕರಣವನ್ನು ಸಂಘದ ಮಾರಾಟಾಧಿಕಾರಿಯವರಿಗೆ ವಹಿಸಲಾಗಿತ್ತು. ಸದರಿ ಮಾರಾಟಾಧಿಕಾರಿಯವರು ಅಂತಿಮವಾಗಿ ಅಮಲ್ಜಾರಿ ಕ್ರಮ ಕೈಗೊಂಡು ಮೂಲ ಸಾಲಗಾರನ ಈ ಕೆಳಗೆ ಕಾಣಿಸಿದ ಸ್ಥಿರಾಸ್ತಿಯನ್ನು ಜಪ್ತಿ ಪಡಿಸಿ ದಿನಾಂಕ: 09–05–2011 ರಂದು ಬಹಿರಂಗ ಹರಾಜಿಗೆ ತೆಗೆಯಲಾಗಿತ್ತು. ಸದರ್ ಬಹಿರಂಗ ಹರಾಜಿನಲ್ಲಿ 6 ಜನ ಬಿಡ್‌ದಾರರು ಭಾಗವಹಿಸಿದ್ದು , ಈ ಪೈಕಿ ಶ್ರೀ ಗೋಪಾಲ ನಾರಾಯಣ ಗದ್ದೇಮನೆ

ಸಾಕೀನ ಬಣಗಟ್ಟು ಅಂಚೆ: ಅಮ್ಮೀನಳ್ಳಿ ತಾ: ಶಿರಸಿ ಈತನು ರೂ.20,36,000/- (ರೂ. ಇಪ್ಪತ್ತು ಲಕ್ಷದ ಮೂವತ್ತಾರು ಸಾವಿರಗಳು ಮಾತ್ರ) ಗಳಿಗೆ ಬಿಡ್ಡ ಮಾಡಿದ್ದು ಅತ್ಯಧಿಕ ಬಿಡ್‌ದಾರನಾಗಿರುತ್ತಾನೆ.

ಡಿಕ್ರಿ ಆದೇಶ ಮತ್ತು ಅಮಲ್ಜಾರಿ ಅರ್ಜಿ ಅನ್ವಯ ಬಾಕಿದಾರನಿಂದ ಸದರ್ ಸ್ಥಿರಾಸ್ತಿ ಜಪ್ತಿ ಮಾಡಿದ ಸಾಲದ ಖಾತೆಗೆ ಹರಾಜು ದಿನಾಂಕದವರೆಗೆ ಅಸಲು, ಬಡ್ಡಿ ಹಾಗೂ ಇತರೇ ಖರ್ಚು ಸೇರಿ ಒಟ್ಟೂ ರಖಂ ರೂ.38,52,736/- ಸಂಘಕ್ಕೆ ಬರಬೇಕಾಗಿರುತ್ತದೆ. ರೂ.20,36,000/- ಗಳ ಅತ್ಯಧಿಕ ಬಿಡ್ಡುದಾರನಾದ ಶ್ರೀ ಗೋಪಾಲ ನಾರಾಯಣ ಗದ್ದೆಮನೆ ಸಾ: ಬಣಗಟ್ಟು ತಾ:ಶಿರಸಿ ಇತನು ಬಿಡ್ಡಿನ ಮೊತ್ತದ ಶೇಖಡಾ 46 ರ ಬಾಬ್ತು ರೂ.9,50,000/-(ರೂ. ಒಂಭತ್ತು ಲಕ್ಷದ ಐವತ್ತು ಸಾವಿರಗಳು ಮಾತ್ರ) ಗಳನ್ನು ಹರಾಜಿನ ಸ್ಥಳದಲ್ಲಿಯೆ ಡಿಕ್ರಿದಾರ ದಿ ತೋಟಗಾರ್ಸ್ ಕೋ-ಆಪರೇಟಿವ್ ಸೇಲ್ ಸೊಸೈಟಿ ಲಿಮಿಟೆಡ್ ಶಿರಸಿ.,(ಉ.ಕ.) ಇದರ ಪ್ರಧಾನ ಕಛೇರಿಯಲ್ಲಿ ವಸೂಲಾಧಿಕಾರಿಗಳ ಅಮಾನತ್ ಖಾತೆಗೆ ಪಾವತಿ ಮಾಡಿರುತ್ತಾನೆ. ಬಾಕಿ ಉಳಿದ ಬಿಡ್ಡ ಮೊತ್ತ ರೂ.10,86,000/- (ರೂ. ಹತ್ತು ಲಕ್ಷದ ಎಂಭತ್ತಾರು ಸಾವಿರಗಳು ಮಾತ್ರ) ಗಳನ್ನು ಮತ್ತು ಮುದ್ರಾಂಕ ಶುಲ್ಕ ರೂ.1,22,160/- ಹಾಗೂ ನೋಂದಣಿ ಫೀ ರೂ.20,360/- ಒಟ್ಟೂ ರೂ.12,28,520/- ಗಳನ್ನು ದಿನಾಂಕ 19-09-2011 ರಂದು ಸಂಘದಲ್ಲಿ ವಸೂಲಾಧಿಕಾರಿಗಳ ಅಮಾನತ್ ಖಾತೆಗೆ ಜಮಾ ಮಾಡಿರುತ್ತಾನೆ.

ದಿ ತೋಟಗಾಸ್ ಕೋ-ಆಪರೇಟಿವ್ ಸೇಲ್ ಸೊಸೈಟಿ ಲಿಮಿಟೆಡ್ ಶಿರಸಿ (ಉ.ಕ.) ಇದರ ಮಾರಾಟಾಧಿಕಾರಿಗಳು ದಿನಾಂಕ 09-05-2011 ರಂದು ನಡೆಸಿದ ಸಾರ್ವಜನಿಕ ಬಹಿರಂಗ ಹರಾಜನ್ನು ಕರ್ನಾಟಕ ಸಹಕಾರ ಸಂಘಗಳ ಕಾನೂನು ಮತ್ತು ನಿಯಮಗಳನ್ನು ಪಾಲಿಸಿ ಹರಾಜು ಕ್ರಮವನ್ನು ನಡೆಸಿರುವುದಾಗಿ ಹಾಗೂ ಸಂಘದ ಬಾಕಿದಾರನಾದ ಶ್ರೀ ಅನಂತ ನಾರಾಯಣ ಗದ್ದೇಮನೆ ಈತನ ಸ್ಥಿರಾಸ್ತಿಯನ್ನು ಶ್ರೀ ಗೋಪಾಲ ನಾರಾಯಣ ಗದ್ದೇಮನೆ, ಸಾ: ಬಣಗಟ್ಟು, ತಾ: ಶಿರಸಿ ರವರಿಗೆ ಮಾರಾಟ ಮಾಡಿರುವ ಹರಾಜನ್ನು ಖಾಯಂಗೊಳಿಸಬೇಕೆಂದು ಉಲ್ಲೇಖ(3) ರಂತೆ ಕಛೇರಿಗೆ ಸವಿಸ್ತಾರವಾದ ವರದಿಯನ್ನು ಸಲ್ಲಿಸಿರುತ್ತಾರೆ.

ದಿನಾಂಕ 09-05-2011 ರಂದು ನಡೆಸಿದ ಸ್ಥಿರಾಸ್ತಿ ಬಹಿರಂಗ ಹರಾಜಿನ ನಡವಳಿಕೆಗಳನ್ನು ಪರಿಶೀಲಿಸಿದಾಗ ಹರಾಜಿನಲ್ಲಿ ಒಟ್ಟೂ 6 ಜನ ಬಿಡ್‌ದಾರರು ಭಾಗವಹಿಸಿದ್ದು, ಈ ಪೈಕಿ ಅತ್ಯಧಿಕ ಬಿಡ್ಡುದಾರನಾದ ಶ್ರೀ ಗೋಪಾಲ ನಾರಾಯಣ ಗದ್ದೇಮನೆ ಸಾ:ಬಣಗಟ್ಟು ಇವರಿಗೆ ರೂ.20,36,000/- (ರೂ. ಇಪ್ಪತ್ತು ಲಕ್ಷದ ಮೂವತ್ತಾರು ಸಾವಿರಗಳು ಮಾತ್ರ) ಗಳಿಗೆ ಮಾರಾಟ ಮಾಡಿರುವುದು ದಾಖಲೆಗಳಿಂದ ತಿಳಿದು ಬಂದಿರುತ್ತದೆ. ಲಿಲಾವು ಆದ ದಿನಾಂಕದಿಂದ 30 ದಿನಗಳ ಅವಧಿಯ ದಿನಾಂಕ 09-06-2011ರ ಒಳಗಾಗಿ ತೀರ್ಪು ಬಾಕಿದಾರರಾದ ಶ್ರೀ ಅನಂತ ನಾರಾಯಣ ಗದ್ದೇಮನೆ ರವರು ತನ್ನ ಸ್ಥಿರಾಸ್ತಿಯನ್ನು ಬಹಿರಂಗ ಹರಾಜಿನಲ್ಲಿ ಮಾರಾಟ ಮಾಡಿದ್ದರ ಕುರಿತು ಕರ್ನಾಟಕ ಸಹಕಾರ ಸಂಘಗಳ ನಿಯಮದಡಿಯಲ್ಲಿ ಯಾವುದೇ ಅರ್ಜಿ ಸಲ್ಲಿಸದೇ ಇರುವ ಪ್ರಯುಕ್ತ,ಕಾರಣ ದಿನಾಂಕ 09-05-2011 ರಂದು ನಡೆಸಲಾದ ಬಹಿರಂಗ ಹರಾಜನ್ನು ಖಾಯಂಗೊಳಿಸಬಹುದೆಂದು ಮಾರಾಟಾಧಿಕಾರಿಯವರು ಸಲ್ಲಿಸಿದ ವರದಿಯನ್ನು ಪರಿಶೀಲಿಸಿ ಮಾರಾಟಾಧಿಕಾರಿಯವರು ಕೈಗೊಂಡ ಕ್ರಮಗಳು ಕಾನೂನುಬದ್ದವಾಗಿದೆ ಎಂದು ಕಂಡುಬಂದಿರುವುದರಿಂದ ಈ ಕೆಳಗಿನ ಸ್ಥಿರೀಕರಣ ಆದೇಶ ಹೊರಡಿಸಲಾಗಿದೆ.

**ಆದೇಶ**

**ಕ್ರಮ ಸಂಖ್ಯೆ. ಸ.ನಿ.21/ಎ.ಬಿ.ಎನ್./ಇ.ಎಕ್ಸ್.ಎನ್/ಸಿ.ಇ.ಪಿ.59/10-11, ದಿನಾಂಕ: 23-02-2012**

ಶ್ರೀ ಎಸ್.ಬಿ.ಆಗೇರ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾಧಿಕಾರಿಗಳು, ಶಿರಸಿ ಉಪವಿಭಾಗ ಶಿರಸಿ ಆದ ನಾನು ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960 ನಿಯಮ 38 (6) (ಎ) ರನ್ವಯ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ಅಮಲ್ಜಾರಿ ಅರ್ಜಿ ಸಂಖ್ಯೆ ಸಿ.ಇ.ಪಿ. 59/2010-11 ಯಲ್ಲಿ ಶ್ರೀ ಅನಂತ ನಾರಾಯಣ ಗದ್ದೇಮನೆ ಇವರಿಗೆ ಸೇರಿದ ಸ್ಥಿರಾಸ್ತಿಯನ್ನು ದಿನಾಂಕ: 09-05-2011ರಂದು ವಾದಿ ಸಂಘದ ಮಾರಾಟಾಧಿಕಾರಿವರು ನಡೆಸಿದ ಮುಂದುವರೆದ ಬಹಿರಂಗ ಹರಾಜಿನಲ್ಲಿ ಶ್ರೀ. ಗೋಪಾಲ ನಾರಾಯಣ ಗದ್ದೆಮನೆ ಸಾ:ಬಣಗಟ್ಟು ಪೋ: ತಾ;ಶಿರಸಿ ಈತನು ಹೆಚ್ಚಿನ ಬಿಡ್ಡುದಾರನಾಗಿದ್ದು, ಈತನಿಗೆ ರೂ.20,36,000/- (ರೂ. ಮೂವತ್ತಾರು ಲಕ್ಷದ ಇಪ್ಪತ್ತು ಸಾವಿರಗಳು ಮಾತ್ರ) ಗಳಿಗೆ ಈ ಕೆಳಗೆ ವಿವರಿಸಿದ ಸ್ಥಿರಾಸ್ತಿಯನ್ನು ಬಹಿರಂಗವಾಗಿ ಹರಾಜು ಮೂಲಕ ಮಾರಾಟ ಮಾಡಿರುವುದನ್ನು ಖಾಯಂಗೊಳಿಸಿ ಸ್ಥಿರೀಕರಿಸಿರುವುದಾಗಿ ಈ ಮೂಲಕ ಆದೇಶ ಮಾಡಿದೆ. ಅಲ್ಲದೇ ದಿ ತೋಟಗಾಸ್ ಕೋ-ಆಪರೇಟಿವ್ ಸೇಲ್ ಸೊಸೈಟಿ ಲಿಮಿಟೆಡ್ ಶಿರಸಿ (ಉ.ಕ.) ಇದರ ಪ್ರಧಾನ ಕಛೇರಿಯಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾಧಿಕಾರಿಗಳು, ಶಿರಸಿ ಉಪವಿಭಾಗ ಶಿರಸಿ (ಉ.ಕ.) ಇವರ ಅಮಾನತ ಖಾತೆಯಲ್ಲಿ ಜಮಾ ಇರುವ ಒಟ್ಟೂ ರಖಂ ರೂ.21,78,520/- ಗಳಲ್ಲಿ ಸದರ್ ಸ್ಥಿರಾಸ್ತಿ ಜಪ್ತಿ ಮಾಡಿದ ಬಾಕಿದಾರನ ಸಾಲದ ಖಾತೆಗೆ ರೂ. 20,36,000/- ಗಳನ್ನು ಜಮಾ ಪಡೆದುಕೊಳ್ಳಲು ಮತ್ತು ಉಳಿದ ರಖಂ ರೂ.1,42,520/- ಗಳಲ್ಲಿ ಮುದ್ರಾಂಕ ಶುಲ್ಕಕ್ಕೆ ರೂ. 1,22,160/- ಹಾಗೂ ನೋಂದಣಿ ಫೀ ರೂ.20,360/- ಭರಣ ಮಾಡಲು ಸಹ ಸದರ ಸಂಘದ ಪ್ರಧಾನ ಕಛೇರಿಯ ಪ್ರಧಾನ ವ್ಯವಸ್ಥಾಪಕರಿಗೆ ಈ ಮೂಲಕ ಆದೇಶ ನೀಡಲಾಗಿದೆ.

**ಸ್ಥಿರಾಸ್ತಿಯ ವಿವರ**

ಉತ್ತರ ಕನ್ನಡ ಜಿಲ್ಲಾ ಶಿರಸಿ ತಾಲೂಕ, ಲಂಡಕನಳ್ಳಿ ಗ್ರಾಮದಲ್ಲಿರುವ ಸ್ಥಿರಾಸ್ತಿ ರೆವೆನ್ಯೂ ಸರ್ವೆ ನಂಬರ್ 33 ಅ 1 ಅ, ಕ್ಷೇತ್ರ.:1-0-0 ಇದರ ಚಕ್ ಬಂದಿ ಸರ್ವೇ ಗಡಿಯಂತೆ.

ಮಾರಾಟದ ಮೊಬಲಗು : ರೂ.20,36,000

ಮಾರಾಟ ಮಾಡಿದ ದಿನಾಂಕ : 23–02–2012

ಈ ಆದೇಶವನ್ನು ನನ್ನ ಸಹಿ ಹಾಗೂ ಕಛೇರಿಯ ಮುದ್ರೆಯೊಂದಿಗೆ ದಿನಾಂಕ: 23–02–2012 ರಂದು ನೀಡಲಾಗಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು
ಶಿರಸಿ ಉಪವಿಭಾಗ ಶಿರಸಿ (ಉ.ಕ.)

**ನಮೂನೆ ಕ್ರಮಾಂಕ –10**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರನ್ವಯ ರಚಿತವಾದ ನಿಯಮ 38, ಉಪನಿಯಮ 7ರ ಪ್ರಕಾರ ಕೊಟ್ಟ

**ವಿಕ್ರಿ ಪ್ರಮಾಣ ಪತ್ರ**

**ನೋಂದಣಿ ಶುಲ್ಕದ ವಿವರ :**

ಚಲನ ರಶೀದಿ ನಂಬರ್ :

ದಿನಾಂಕ : 23–02–2012

ರಖಂ : 20,36,000/–

ಶಾಖೆ : ಶಿರಸಿ

ದಾವಾ ಸಂಖ್ಯೆ : ಡಿ.ಆರ್.ಎನ್/ಎಫ್/ಡಿ.ಡಿಎಸ್/1490/09–10

ಅಮಲ್ಜಾರಿ ಸಂಖ್ಯೆ : ಸಿ.ಇ.ಪಿ.59/10–11

ಹೆಸರು : ಶ್ರೀ ಎಸ್.ಬಿ.ಅಗೇರ,
ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾಧಿಕಾರಿಗಳು
ಶಿರಸಿ ಉಪವಿಭಾಗ ಶಿರಸಿ (ಉ.ಕ.)

ದಿ ತೋಟಗಾರ್ಸ್ ಕೋ–ಆಪರೇಟಿವ್ ಸೇಲ್ ಸೊಸೈಟಿ ಲಿಮಿಟೆಡ್., ಶಿರಸಿ (ಉ.ಕ) ................ಡಿಕ್ರಿದಾರ

**ವಿರುದ್ಧ**

ಶ್ರೀ ಅನಂತ ನಾರಾಯಣ ಗದ್ದೇಮನೆ, ಮೆ॥ ವೆಂಕಟೇಶ ಟ್ರೇಡರ್ಸ ಶಿರಸಿ .......... ತೀರ್ಪುಬಾಕಿದಾರ

ಈ ಮೂಲಕ ಪ್ರಮಾಣೀಕರಿಸುವುದೇನೆಂದರೆ,

ಉತ್ತರಕನ್ನಡ ಜಿಲ್ಲಾ ಶಿರಸಿ ತಾಲೂಕ ಬಣಗಟ್ಟು ಗ್ರಾಮದ ರಹವಾಸಿ ಶ್ರೀ ಗೋಪಾಲ ನಾರಾಯಣ ಗದ್ದೇಮನೆ ಇವರು ಉತ್ತರಕನ್ನಡ ಜಿಲ್ಲಾ, ಶಿರಸಿ ತಾಲೂಕು, ಲಂಡಕನಹಳ್ಳಿ ಗ್ರಾಮದ ನಿವಾಸಿ ಶ್ರೀ ಅನಂತ ನಾರಾಯಣ ಗದ್ದೇಮನೆ ಇವರಿಂದ ದಿ ತೋಟಗಾರ್ಸ್ ಕೋ–ಆಪರೇಟಿವ್ ಸೇಲ್ ಸೊಸೈಟಿ ಲಿಮಿಟೆಡ್.,ಶಿರಸಿ ಇದರ ಶಿರಸಿ ಪ್ರಧಾನ ಕಛೇರಿಗೆ ಸಂದಾಯವಾಗತಕ್ಕ ಬಾಕಿ ವಸೂಲಿ ಬಗ್ಗೆ ಈ ಕಾರ್ಯಾಲಯದಲ್ಲಿ ದಾಖಲು ಪಡಿಸಿದ ಅಮಲ್ಜಾರಿ ಪ್ರಕರಣ ಸಂಖ್ಯೆ ಸಿ.ಇ.ಪಿ. 59/2010–11 ನೇದರ ಅಮಲ ಬಜಾವಣೆಯಲ್ಲಿ ಈ ಕೆಳಗೆ ಅನುಬಂಧದಲ್ಲಿ ಕಾಣಿಸಿದ ತೀರ್ಪು ಬಾಕಿದಾರನ ಜಪ್ತಿಪಡಿಸಿದ ಸ್ಥಿರಾಸ್ತಿಯನ್ನು ಅಧಿಕಾರ ಹೊಂದಿದ ಮಾರಾಟಾಧಿಕಾರಿ, ದಿ ತೋಟಗಾರ್ಸ್ ಕೋ–ಆಪರೇಟಿವ್ ಸೇಲ್ ಸೊಸೈಟಿ ಲಿಮಿಟೆಡ್ ಶಿರಸಿ., (ಉ.ಕ.) ಪ್ರಧಾನ ಕಛೇರಿ ಇವರು ನಡೆಸಿದ ಮುಂದುವರೆದ ಜಾಹೀರ ಲಿಲಾವಿನಲ್ಲಿ ಶ್ರೀ ಶ್ರೀ ಗೋಪಾಲ ನಾರಾಯಣ ಗದ್ದೇಮನೆ ಸಾ: ಬಣಗಟ್ಟು ತಾ: ಶಿರಸಿ ಇವರು ಖರೀದಿಸಿ, ಖರೀದಿ ರಖಂ ರೂ. 20,36,000/–(ರೂ. ಇಪ್ಪತ್ತು ಲಕ್ಷದ ಮೂವತ್ತಾರು ಸಾವಿರಗಳು ಮಾತ್ರ)ವನ್ನು ಪಾವತಿ ಮಾಡಿರುತ್ತಾರೆ. ಮತ್ತು ಸದರಿ ವಿಕ್ರಿಯು ನನ್ನಿಂದ ದಿನಾಂಕ 21–09–2011ರಂದು ಖಾಯಂ ಮಾಡಲ್ಪಟ್ಟಿರುತ್ತದೆ

**ಸ್ಥಿರಾಸ್ಥಿಗಳ ಅನುಬಂಧ**

ನೋಂದಣಿ ಜಿಲ್ಲಾ : ಉತ್ತರಕನ್ನಡ

ತಾಲೂಕು : ಶಿರಸಿ

ಗ್ರಾಮ : ಲಂಡಕನಹಳ್ಳಿ

<u>ಸ್ಥಿರಾಸ್ತಿಗಳ ವರ್ಣನೆ</u>

ಉತ್ತರ ಕನ್ನಡ ಜಿಲ್ಲಾ , ಶಿರಸಿ ತಾಲೂಕು , ಲಂಡಕನಹಳ್ಳಿ ಗ್ರಾಮದಲ್ಲಿರುವ ಸ್ಥಿರಾಸ್ತಿ ಸರ್ವೆ ನಂ 33 ಅ 1 ಅ ಕ್ಷೇತ್ರ 01–00–00 ಇದರ ಚಕ್‌ಬಂದಿ ಸರ್ವೇ ಗಡಿಯಂತೆ.

ವಿಕ್ರಿ ಕಿಮ್ಮತ್ತು ಅಂತೂ ರೂ.20,36,000/– (ರೂ. ಇಪ್ಪತ್ತು ಲಕ್ಷದ ಮೂವತ್ತಾರು ಸಾವಿರಗಳು ಮಾತ್ರ)

ಮಾರಾಟದ ದಿನಾಂಕ : 23–02–2012

ನನ್ನ ಸಹಿ ಹಾಗೂ ಕಛೇರಿ ಮೊಹರಿನೊಂದಿಗೆ ಇಂದು ದಿನಾಂಕ:23–02–2012ರಂದು ಕೊಡಲ್ಪಟ್ಟಿತು.

ಸಹಕಾರ ಸಂಘಗಳ ಸಹಾಯಕ ನಿಬಂಧಕರು
ಶಿರಸಿ ಉಪವಿಭಾಗ ಶಿರಸಿ (ಉ.ಕ)

## ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾಧಿಕಾರಿಗಳು ಶಿರಸಿ ಉಪವಿಭಾಗ ಶಿರಸಿ ಇವರ ನ್ಯಾಯಾಲಯದಲ್ಲಿ

**ಫಾರ್ಮ ನಂ.–11**

**38ನೇ ರೂಲಿನ (7) ಕಲಂ**

**ಸ್ಥಿರಸ್ವತ್ತುಗಳನ್ನು ಕೊಂಡದಕ್ಕೆ ಪ್ರಕಟಣೆ**

ದಾವಾ ಸಂಖ್ಯೆ : ಡಿ.ಆರ್.ಎನ್/ಎಫ್/ಡಿ.ಡಿಎಸ್/1490/09–10

ಅಮಲ್ಜಾರಿ ಸಂಖ್ಯೆ : ಸಿ.ಇ.ಪಿ.59/10–11

ಉತ್ತರ ಕನ್ನಡ ಜಿಲ್ಲಾ ಶಿರಸಿ ತಾಲೂಕ, ಬಣಗಟ್ಟು ಗ್ರಾಮದ ನಿವಾಸಿ ಶ್ರೀ ಗೋಪಾಲ ನಾರಾಯಣ ಗದ್ದೇಮನೆ ಸಾ:ಅಮ್ಮೀನಳ್ಳಿ ತಾಲೂಕ: ಶಿರಸಿ ಇವರು ಈ ಕೆಳಗೆ ತೋರಿಸಿದ ಶ್ರೀ ಅನಂತ ನಾರಾಯಣ ಗದ್ದೇಮನೆ, ಸಾ:ಲಂಡಕನಹಳ್ಳಿ ತಾ:ಶಿರಸಿ ಇವರಿಗೆ ಸೇರಿದ ಈ ಕೆಳಗೆ ನಮೂದಿಸಿದ ಸ್ಥಿರಾಸ್ತಿಯನ್ನು ಮುಂದುವರಿದ ಬಹಿರಂಗ ಹರಾಜಿನಲ್ಲಿ 2011 ನೇ ಇಸವಿ ಮೇ ತಿಂಗಳ 09ನೇ ತಾರೀಖಿನಂದು ಕ್ರಯಕ್ಕೆ ಕೊಂಡಿರುತ್ತಾರಾಗಿಯೂ ಮತ್ತು ದರಖಾಸ್ತು ರಖಂ ರೂ.20,36,000/–(ರೂ. ಇಪ್ಪತ್ತು ಲಕ್ಷದ ಮೂವತ್ತಾರು ಸಾವಿರಗಳು ಮಾತ್ರ) ವನ್ನು ಸಂಪೂರ್ಣವಾಗಿ ಪಾವತಿ ಮಾಡಿದ್ದಾರಾಗಿಯೂ ಈ ಮೂಲಕ ಎಲ್ಲಾ ಜನರಿಗೆ ಬಹಿರಂಗವಾಗಿ ತಿಳಿಸೋಣವಾಗುತ್ತದೆ. ಆದ ಪ್ರಯುಕ್ತ ಸದರ್ ಸ್ಥಿರಾಸ್ತಿಯಲ್ಲಿರುವ ತೀರ್ಪು ಬಾಕಿದಾರ ಶ್ರೀ ಅನಂತ ನಾರಾಯಣ ಗದ್ದೇಮನೆ ಸಾ: ಲಂಡಕನಹಳ್ಳಿ ತಾ: ಶಿರಸಿ ಇವರ ಸದರಿ ಹಕ್ಕು ವ ಪ್ರಯೋಜನಗಳಿಗೆ ಶ್ರೀ ಗೋಪಾಲ ನಾರಾಯಣ ಗದ್ದೇಮನೆ, ಸಾ: ಬಣಗಟ್ಟು, ತಾ: ಶಿರಸಿ ಇವರು ಉತ್ತರಾಧಿಕಾರಿಗಳಾಗಿದ್ದಾರೆ, ಎಂಬುದಾಗಿ ಈ ಮೂಲಕ ದೃಢಪಡಿಸೋಣವಾಗುತ್ತದೆ.

| ತಾಲೂಕ | ಗ್ರಾಮ | ರೆವೆನ್ಯೂ ಸರ್ವೇ ನಂಬರ್ | ಕ್ಷೇತ್ರ | ಖಾತೆದಾರನ ಹೆಸರು |
|---|---|---|---|---|
| ಶಿರಸಿ | ಲಂಡಕನಳ್ಳಿ | 33 ಅ 1 ಅ | 1–0–00 | ಶ್ರೀ ಗೋಪಾಲ ನಾರಾಯಣ ಗದ್ದೇಮನೆ |

ಸಹಕಾರ ಸಂಘಗಳ ಸಹಾಯಕ ನಿಬಂಧಕರು
ಶಿರಸಿ ಉಪವಿಭಾಗ ಶಿರಸಿ (ಉ.ಕ)

**ಪಿ.ಡಿ. 50**

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ

**ಬಿ3:ಅಮೊ:ವಾಹನ:ವಿವ:21/09–10 ದಿನಾಂಕ:20–08–2011**

**ಉಪಸ್ಥಿತರು** : ಶ್ರೀ ಮನೋಜ್ ಕುಮಾರ್ ತ್ರಿಪಾಠಿ, ಭಾ.ಅ.ಸೇ.,
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

**ಪಿರ್ಯಾಧಿದಾರರು** : ಪೊಲೀಸ್ ಸಬ್‌ಇನ್ಸ್‌ಪೆಕ್ಟರ್,
ಸೊರಬ ಪೊಲೀಸ್ ಠಾಣೆ. (ಮಾನ್ಯ ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ)

**ಬಾಧ್ಯತೆದಾರರು** : ಶ್ರೀ ಇಫ್ತಿಕರ್ ಅಹಮದ್ ಬಿನ್ ಹಸನ್‌ಖಾನ್,
38 ವರ್ಷ, ಚಿಕ್ಕಜಂಬೂರು ಗ್ರಾಮ, ಶಿರಾಳಕೊಪ್ಪ, ಶಿಕಾರಿಪುರ ತಾಲ್ಲೂಕು
(ಶ್ರೀ ಇ.ಎನ್. ಯೋಗರಾಜಪ್ಪ ವಕೀಲರು, ಸಾಗರ)

ಪ್ರಸ್ತಾವನೆ :–

ದಿ:01–09–2006 ರಂದು ಒಂದು ಬೈಕ್‌ನಲ್ಲಿ ಶ್ರೀಗಂಧ ಅಕ್ರಮವಾಗಿ ಸಾಗಿಸುತ್ತಿರುವುದನ್ನು ಸಬ್‌ಇನ್ಸ್‌ಪೆಕ್ಟರ್ ಆಫ್ ಪೊಲೀಸ್ ಮತ್ತು ಸಿಬ್ಬಂದಿಯವರು ಪತ್ತೆಹಚ್ಚಿ ಬರೆದ ಮಹಜರ್ ವಿವರ ಈ ಕೆಳಗಿನಂತಿದೆ.

ದಿ:01–09–2006 ರಂದು ಪೊಲೀಸ್ ಸಬ್‌ಇನ್ಸ್‌ಪೆಕ್ಟರ್, ಸೊರಬ ಪೊಲೀಸ್ ಠಾಣೆ, ಇವರಿಗೆ ಮಧ್ಯಾಹ್ನ ಸುಮಾರು 12–30 ಗಂಟೆಗೆ ಬಂದ ಖಚಿತ ವರ್ತಮಾನದ ಮೇರೆಗೆ ಮಧ್ಯಾಹ್ನ 1–00 ಗಂಟೆಗೆ ಸೊರಬ ತಾಲ್ಲೂಕು ಅಂಡಿಗೆ ಗ್ರಾಮದ ಅಂಬೇಡ್ಕರ್ ಕಾಲೋನಿ ಹತ್ತಿರ ಕಾಯುತ್ತಿರುವಾಗ ಅಂಬೇಡ್ಕರ ನಗರದಿಂದ ಒಂದು ಹಿರೋಹೊಂಡಾ ಮೋಟಾರ್ ಸೈಕಲ್ ಕೆಎ–15–ಜೆ–7174 ಬರುತ್ತಿದ್ದು, ಅದರಲ್ಲಿ 2 ಜನ ಆಸಾಮಿಗಳಿದ್ದು, ಅದನ್ನು ತಡೆದು ನಿಲ್ಲಿಸಿದಾಗ ಹಿಂದುಗಡೆ ಕೂತ ಆಸಾಮಿಯ ಕಾಲಿನ ಮೇಲೆ ಒಂದು ಪ್ಲಾಸ್ಟಿಕ್ ಚೀಲ ಇಟ್ಟುಕೊಂಡಿದ್ದು, ಅದನ್ನು ಬಿಚ್ಚಿ ನೋಡಿದಾಗ ಅದರೊಳಗಡೆ ಶ್ರೀಗಂಧದ ತುಂಡುಗಳಿದ್ದು, ಬೈಕ್ ಚಾಲನೆ ಮಾಡುತ್ತಿದ್ದವನು ಇಫ್ತಿಕರ್ ಅಹಮದ್ ಬಿನ್ ಹಸನ್‌ಖಾನ್, 21 ವರ್ಷ, ಡ್ರೈವರ್ ಕೆಲಸ, ಬ್ಯಾಣದಕೇರಿ ವಾಸಿ, ಶಿರಾಳಕೊಪ್ಪ ಟೌನ್, ಸ್ವಂತ ಊರು ಚಿಕ್ಕಜಂಬೂರು, ಶಿಕಾರಿಪುರ ತಾ॥ ಎಂದು ಬೈಕ್‌ನ ಹಿಂಭಾಗದಲ್ಲಿ ಚೀಲ ಹಿಡಿದು ಕುಳಿತ ಆಸಾಮಿ ಹೆಸರು ಆನಂದ ಬಿನ್ ಬಸವರಾಜಪ್ಪ, 24 ವರ್ಷ, ತಮಿಳು ಎಸ್.ಸಿ. ಜನಾಂಗ, ಅಂಬೇಡ್ಕರ್ ಕಾಲೋನಿ, ಅಂಡಿಗೆ ಹತ್ತಿರ, ಸೊರಬ ತಾ॥ ಅಂತ ತಿಳಿಸಿದನು. ಹಾಗೂ ರಹದಾರಿ ಕೇಳಲಾಗಿ ಶ್ರೀಗಂಧ ಸಾಗಾಣಿಕೆಗೆ ಪರವಾನಿಗೆ ಇಲ್ಲವೆಂದು ತಿಳಿಸಿರುತ್ತಾನೆ. ಸ್ಥಳದಲ್ಲಿದ ಪಂಚರ ಸಮಕ್ಷಮ ಆಸಾಮಿ, ಶ್ರೀಗಂಧ ಮತ್ತು ಮೋಟಾರ್ ಬೈಕ್‌ನ್ನು ಇಲಾಖಾ ಪರ ವಶಪಡಿಸಿಕೊಂಡು ಶ್ರೀಗಂಧ ತೂಕ ಮಾಡಿದಾಗ 15 ಕೆ.ಜಿ. ಇದ್ದು, ಅದರ ಅಂದಾಜು ಬೆಲೆ ₹ 15,000/– ಆಗಿದ್ದು, ಐ.ಪಿ.ಸಿ. ಕಲಂ 379, R/W ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 86, 87ರ ಪ್ರಕಾರ ಠಾಣೆ ಗುನ್ನೆ ನಂ:123/2006ನ್ನು ದಾಖಲಿಸಿರುತ್ತಾರೆ.

ನಂತರ ಈ ಪ್ರಕರಣದಲ್ಲಿ ಜಪ್ತಾದ ವಾಹನ ಮತ್ತು ಶ್ರೀಗಂಧದ ತುಂಡುಗಳನ್ನು ಈ ನ್ಯಾಯಾಲಯದ ಸುರ್ಪಧಿಗೆ ಪಡೆಯಲು ಮಾನ್ಯ 2ನೇ ಶೀಘ್ರ ವಿಲೇವಾರಿ, ಶಿವಮೊಗ್ಗ ನ್ಯಾಯಾಲಯದ ಎಸ್.ಸಿ.ನಂ: 3/2009 ದಿ:02–09–2009ರಲ್ಲಿ ಆದೇಶವಾಗಿರುತ್ತದೆ. ಅದರಂತೆ ಈ ನ್ಯಾಯಾಲಯದಿಂದ ಸಂ:ಬಿ3.ಅಮೊ.ಕೋರ್ಟ್.ಜಿಎಲ್.301/09–10 ದಿ:07–09–2009ರ ಪತ್ರದಲ್ಲಿ ಶ್ರೀ ಕೆ.ನಾಗಪ್ಪ, ವನಪಾಲಕರು ಸೊರಬ ವಲಯ, ಇವರನ್ನು ದಿ:10–09–2009 ರಂದು ಮಾನ್ಯ 2ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ಶಿವಮೊಗ್ಗದಿಂದ ಹಿರೋಹೊಂಡಾ ಬೈಕ್ ಕೆಎ–15–ಜೆ–7174ನ್ನು ಪಡೆದು ಈ ನ್ಯಾಯಾಲಯಕ್ಕೆ ಒಪ್ಪಿಸಲು ತಿಳಿಸಲಾಗಿತ್ತು. ಅದರಂತೆ ಶ್ರೀ ನಾಗಪ್ಪ, ವನಪಾಲಕರು ಸದರಿ 2ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ಶಿವಮೊಗ್ಗದಿಂದ ಹಿರೋಹೊಂಡಾ ಬೈಕ್ ಪಡೆದು ಈ ನ್ಯಾಯಾಲಯಕ್ಕೆ ದಿ: 11–09–2009 ರಂದು ಒಪ್ಪಿಸಿರುತ್ತಾರೆ. ಸದರಿ ವಾಹನವು ಸಾಗರದ ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿ ಸುರಕ್ಷತೆಗಾಗಿಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುರ್ಪಧಿಗೆ ಕೊಡಲು ಈ ನ್ಯಾಯಾಲಯದಿಂದ ಆದೇಶವಾಗಿದೆ.

ಈ ವಾಹನದ ಆರ್.ಸಿ. ಮಾಲೀಕರೆಂದು ಶ್ರೀ ಇಫ್ತಿಕರ್ ಅಹಮದ್ ಬಿನ್ ಹಸನ್‌ಖಾನ್, 38 ವರ್ಷ, ಚಿಕ್ಕಜಂಬೂರು ಗ್ರಾಮ, ಶಿರಾಳಕೊಪ್ಪ, ಶಿಕಾರಿಪುರ ತಾ॥ ಇವರು ವಕೀಲರ ಮುಖಾಂತರ ಅರ್ಜಿಯನ್ನು ದಿ:13–10–2009 ರಂದು ಈ ನ್ಯಾಯಾಲಯಕ್ಕೆ ಸಲ್ಲಿಸಿ, ಈ ವಾಹನ ಮಧ್ಯಂತರ ಅವಧಿಗೆ ಬಿಟ್ಟುಕೊಡಲು ಕೋರಿರುತ್ತಾರೆ. ಇವರ ಅರ್ಜಿಯನ್ನು ದಿ:02–04–2011 ರಂದು ಈ ನ್ಯಾಯಾಲಯದಿಂದ ತಿರಸ್ಕರಿಸಿ ಆದೇಶ ಹೊರಡಿಸಿದೆ.

ನಂತರ ಶ್ರೀ ಹೆಚ್.ಎಂ.ಜಗನ್ನಾಥ, ಆರಕ್ಷಕ ಮತ್ತು ನಿರೀಕ್ಷಕರು ಸಂಚಾರಿ ನಿಯಂತ್ರಣ, ಪೊಲೀಸ್ ಠಾಣೆ, ಶಿವಮೊಗ್ಗ (ಸೊರಬ ಪೊಲೀಸ್ ಠಾಣೆಯ ಆಗಿನ ಪೊಲೀಸ್ ಸಬ್‌ಇನ್ಸ್‌ಪೆಕ್ಟರ್) ಇವರನ್ನು ದಿ:02–07–2011 ರಂದು ಈ ನ್ಯಾಯಾಲಯಕ್ಕೆ ಕರೆಸಿ ಸತ್ಯಪ್ರತಿಜ್ಞೆ ಬೋಧಿಸಿ ಮುಖ್ಯ ವಿಚಾರಣೆ ಸಹಾಯಕ ಸರ್ಕಾರಿ ಅಭಿಯೋಜಕರಿಂದ " 23–10–2005 ರಿಂದ 07–09–2007 ರವರೆಗೆ ಸೊರಬ ಪೋಲೀಸ್ ಠಾಣೆಯಲ್ಲಿ ಪೋಲೀಸ್ ಸಬ್‌ಇನ್ಸ್‌ಪೆಕ್ಟರ್ ಆಗಿ ಕಾರ್ಯ ನಿರ್ವಹಿಸಿರುತ್ತೇನೆ. ದಿ:01–09–2006 ರಂದು ನಾನು ಠಾಣೆಯಲ್ಲಿದ್ದಾಗ ಬಂದ ಖಚಿತ ವರ್ತಮಾನದ ಮೇರೆಗೆ ಸಿಬ್ಬಂದಿಗಳೊಂದಿಗೆ ಇಲಾಖಾ ವಾಹನದಲ್ಲಿ ಅಂಡಿಗೆ ಗ್ರಾಮಕ್ಕೆ ಹೋಗಿ ಅಲ್ಲಿ ಸಮೀಪದಲ್ಲಿದ್ದ ಪಂಚರನ್ನು ಬರಮಾಡಿಕೊಂಡು ಅವರಿಗೆ ವಿಷಯ ತಿಳಿಸಿ, ಅಂಡಿಗೆ ಗ್ರಾಮದ ಅಂಬೇಡ್ಕರ್ ಕಾಲೋನಿಯ ಕ್ರಾಸ್ ಬಳಿ ಪಂಚರ ಜೊತೆ ಕಾಯುತ್ತಿದ್ದಾಗ ಕಾಲೋನಿ ಕಡೆಯಿಂದ ಒಂದು ಹೀರೋ ಹೊಂಡ ಬೈಕ್‌ನಲ್ಲಿ 2 ಜನ ವ್ಯಕ್ತಿಗಳು ಬರುತ್ತಿದ್ದು, ಅವರನ್ನು ತಡೆದು ನಿಲ್ಲಿಸಿದಾಗ ಆಸಾಮಿಗಳು ಓಡಲು ಯತ್ನಿಸಿದ್ದು ಅವರನ್ನು ಹಿಡಿದು ವಿಚಾರಿಸಿದಾಗ ಬೈಕ್ ಚಲಾಯಿಸುತ್ತಿದ್ದವನ ಹೆಸರು ಇಫ್ತಿಕಾರ್ ಅಹಮದ್ ಮತ್ತು ಹಿಂಬದಿ ಕುಳಿತವನ ಹೆಸರು ಆನಂದ ಎಂದು ಇದ್ದು ಹಿಂಬದಿ ಸವಾರನ ತೊಡೆಯ ಮೇಲೆ ಬಿಳಿ ಚೀಲವಿದ್ದು, ಚೀಲವನ್ನು ಬಿಚ್ಚಿ ನೋಡಿದಾಗ ಅದರಲ್ಲಿ ಗಂಧದ ಒಟ್ಟು 6 ತುಂಡುಗಳು ಮತ್ತು ಬೇರು ಇತ್ತು ಅದನ್ನು ಸಾಗಿಸಲು ಅವರುಗಳ ಬಳಿ ಯಾವುದೇ ರಹದಾರಿ ಇರಲಿಲ್ಲ. ವಾಹನವನ್ನು ಪರಿಶೀಲಿಸಿದಾಗ ಕೆಎ 15 ಜೆ 7174 ಹೀರೋಹೊಂಡಾ ಸ್ಲೆಂಡರ್ ಪ್ಲಸ್ ಆಗಿತ್ತು. ಸದರಿ ಶ್ರೀಗಂದದ ತುಂಡುಗಳು ಒಟ್ಟು 15 ಕೆ.ಜಿ. ತೂಕವಿದ್ದು, ಅವುಗಳನ್ನು ಮತ್ತು ವಾಹನವನ್ನು ಅಮಾನತ್ತುಪಡಿಸಿಕೊಂಡು ಸ್ಥಳದಲ್ಲಿ ಮಹಜರ್ ಬರೆಯಲಾಯಿತು. ಮಹಜರ್‌ನ್ನು ಈಗ ನೋಡುತ್ತಿದ್ದು ಅದರನ್ನು ನಿ.ಪಿ.1 ಎಂದು ಗುರುತಿಸಿದೆ. ಅದರಲ್ಲಿನ ನನ್ನ ಸಹಿ ನಿಪಿ.1ಎ ಎಂದು ಗುರುತಿಸಿದೆ. ಆರೋಪಿ ಮತ್ತು ವಾಹನದೊಂದಿಗೆ ಠಾಣೆಗೆ ಬಂದು ಸ್ವದೂರಿನೊಂದಿಗೆ ಗುನ್ನೆ ಸಂಖ್ಯೆ 123/06 ಅಡಿಯಲ್ಲಿ ಪ್ರಕರಣ ದಾಖಲಿಸಿದೆ. ಸ್ವದೂರನ್ನು ಈಗ ನೋಡುತ್ತಿದ್ದು ಅದನ್ನು ನಿಪಿ 2ಎ ಎಂದು ಗುರುತಿಸಿದೆ. ಪ್ರಥಮ ವರ್ತಮಾನ ವರದಿಯನ್ನು ಈಗ ನೋಡುತ್ತಿದ್ದು ಅದನ್ನು ನಿಪಿ 3 ಎಂದು ಗುರುತಿಸಿದೆ. ಅದರಲ್ಲಿಯ ನನ್ನ ಸಹಿಯನ್ನು ನಿಪಿ 3ಎ ಎಂದು ಗುರುತಿಸಿದೆ. ತನಿಖೆಯನ್ನು ಮುಕ್ತಾಯಗೊಳಿಸಿ ದೋಷಾರೋಪಣ ಪಟ್ಟಿಯನ್ನು ನ್ಯಾಯಾಲಯಕ್ಕೆ ಸಲ್ಲಿಸಿದ್ದೇನೆ. ವಾಹವನ್ನು ಶ್ರೀಗಂಧ ಅಕ್ರಮ ಸಾಗಾಣಿಕೆಗೆ ಬಳಸಿದ್ದರಿಂದ ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿದೆ.

ಪಾಟಿ ಸವಾಲು ಎಂ.ಎ.ಬಿ. ವಕೀಲರಿಂದ "ವರ್ತಮಾನ ಬಂದಾಗ ಮಧ್ಯಾಹ್ನ 12–30 ಗಂಟೆಯಾಗಿತ್ತು. ಆಗ ನಾನು ಠಾಣೆಯಲ್ಲೆ ಇದ್ದೆನು. ತಕ್ಷಣ ಸಿಬ್ಬಂದಿಯೊಂದಿಗೆ ಪಂಚರನ್ನು ಕರೆದುಕೊಂಡು ಹೋಗಿರುತ್ತೇನೆ. ಠಾಣೆಯಿಂದ ಘಟನಾ ಸ್ಥಳಕ್ಕೆ 8 ಕಿ.ಮೀ ಆಗುತ್ತದೆ. ಅಂಡಿಗೆ ಗ್ರಾಮದಿಂದ ಪಂಚರನ್ನು ಕರೆದುಕೊಂಡು ಹೋಗಿರುತ್ತೇನೆ. ಘಟನಾ ಸ್ಥಳಕ್ಕೆ ನಾನು ಚಾಲಕ ಮತ್ತು 4 ಸಿಬ್ಬಂದಿ ಮತ್ತು ಪಂಚರೊಂದಿಗೆ ಹೋಗಿರುತ್ತೇವೆ. ಘಟನಾ ಸ್ಥಳ ತಲುಪಿದಾಗ 1–00 ಗಂಟೆಯಾಗಿತ್ತು. ಘಟನಾ ಸ್ಥಳದ ಸುತ್ತಮುತ್ತ ಯಾವುದೇ ವಾಸದ ಮನೆಗಳಿಲ್ಲ. ಸುಮಾರು 300 ಅಡಿ ದೂರದಲ್ಲಿ ಒಂದು ರೈಸ್ ಮಿಲ್ ಇದೆ. ನಾವು ಕಾಯುತ್ತಿದ್ದ ಸ್ಥಳದಿಂದ 250 ಮೀಟರ್ ಅಂತರದಿಂದ ಬೈಕ್ ಬರುವುದನ್ನು ಗಮನಿಸಿದೆವು. ಆಗ ನಾವು ಮರೆಯಲ್ಲಿದ್ದೆವು. ನಾವು ಸ್ವಲ್ಪ ದೂರ ದೂರ ನಿಂತಿದ್ದೆವು. ಅವರು ಸ್ಥಳಕ್ಕೆ ಬಂದ ಕೂಡಲೇ ನಾವು ಸುತ್ತುವರೆದೆವು. ಆ ಸಮಯದಲ್ಲಿ ಯಾವುದೇ ವಾಹನ ಸಂಚಾರ ಇರಲಿಲ್ಲ. ನಾವು ಸುತ್ತುವರೆದಾಗ ಚಾಲಕ ಮುಂಬದಿ ಕುಳಿತಿದ್ದು, ಹಿಂಬದಿ ಕುಳಿತವನು ಓಡಲು ಪ್ರಯತ್ನಿಸಿದರೂ ನಾವು ಹಿಡಿದಿರುತ್ತೇವೆ. 1ನೇ ಆರೋಪಿಗೆ 2ನೇ ಅರೋಪಿಗೆ ಪರಿಚಯ ಇಲ್ಲ ಎಂದರೆ ಸರಿಯಲ್ಲ. ಅಂಡಿಗೆ ಗ್ರಾಮ ಎಂದರೆ ಅಂಬೇಡ್ಕರ್ ಕಾಲೋನಿಯವನು. ಅಂಡಿಗೆ ಗ್ರಾಮದ ಮೂಲಕ ಶಿರಾಳಕೊಪ್ಪಕ್ಕೆ ಹೋಗಬೇಕು ಎಂದರೆ ಸರಿ. ಚೀಲವನ್ನು ಸ್ಥಳದಲ್ಲಿಯೇ ಬಿಚ್ಚಿ ನೋಡಲಾಯಿತು. ಸ್ಥಳಕ್ಕೆ ರೈಸ್ ಮಿಲ್‌ನಿಂದ ಸಿಬ್ಬಂದಿ ಮೂಲಕ ಸ್ಕೇಲ್ ತಕ್ಕಡಿ ತರಿಸಿ ತೂಕ ಮಾಡಿರುತ್ತೇವೆ. ಟಾಟಾ ಐಎಸ್ ವಾಹನದ ಮೂಲಕ ತಕ್ಕಡಿ ತರಿಸಲಾಯ್ತು. ಈ ಎಲ್ಲಾ ವಿಷಯವನ್ನು ಮಹಜರ್‌ನಲ್ಲಿ ಬರೆದಿರುವುದಿಲ್ಲ. ರಹದಾರಿಯನ್ನು ಎರಡೂ ಜನರಿಂದ ಕೇಳಿರುತ್ತೇವೆ. ಸ್ಥಳದಲ್ಲಿ ವಾಹನ ಮಾಲೀಕರ ಬಗ್ಗೆ ವಿಚಾರಿಸಿರುವುದಿಲ್ಲ. ಠಾಣೆಗೆ ಮ.2–30 ಗಂಟೆಗೆ ಬರಲಾಯಿತು. ಶ್ರೀಗಂಧ ಹಿಡಿದ ಬಗ್ಗೆ ನಂತರದಲ್ಲಿ ಅರಣ್ಯ ಇಲಾಖೆಯವರಿಗೆ ತಿಳಿಸಿರುತ್ತೇವೆ. ಪಂಚರು ಠಾಣೆಗೆ ಬಂದಿರುವುದಿಲ್ಲ. 1ನೇ ಆರೋಪಿ ಶಿರಾಳಕೊಪ್ಪಕ್ಕೆ ಬರುವಾಗ 2ನೇ ಆರೋಪಿ ಶಿರಾಳಕೊಪ್ಪಕ್ಕೆ ಬರುವುದಾಗಿ ತಿಳಿಸಿ ಗಾಡಿಯಲ್ಲಿ ಲಿಫ್ಟ್ ಕೇಳಿ ಬಂದಿರುತ್ತಾನೆ ಎಂದರೆ ಸರಿಯಲ್ಲ. 1ನೇ ಆರೋಪಿಗೆ ಮತ್ತು ಮುದ್ದೇ ಮಾಲಿಗೆ ಸಂಬಂಧ ಇಲ್ಲ ಎಂದರೆ ಸರಿಯಲ್ಲ. 1 ಮತ್ತು 2ನೇ ಆರೋಪಿಯನ್ನು ಶೀಘ್ರ ನ್ಯಾಯಾಲಯ ನಿರಪರಾದಿಗಳೆಂದು ಬಿಡುಗಡೆ ಮಾಡಿದ ಆದೇಶ ನನಗೆ ತಿಳಿದಿಲ್ಲ. ಈ ಆರೋಪಿಗಳ ವಿರುದ್ಧ ನಮ್ಮ ಠಾಣೆಯಲ್ಲಿ ಬೇರೆ ಯಾವುದೇ ಕೇಸು ದಾಖಲಾಗಿರುವುದಿಲ್ಲ. ಆ ದಿನ ಬೈಕ್‌ನ್ನು ಅಕ್ರಮ ಸಾಗಾಣಿಕೆಗೆ ಬಳಸಿಲ್ಲ ಎಂದರೆ ಸರಿಯಲ್ಲ".

ಡಿಫೆನ್ಸ್ ಸಾಕ್ಷಿ ಶ್ರೀ ಇಫ್ತಿಕರ್ ಅಹಮದ್, ಇವರನ್ನು ದಿ:23–07–2011 ರಂದು ಕರೆಸಿ ಸತ್ಯಪ್ರತಿಜ್ಞೆ ಬೋಧಿಸಿ ಮುಖ್ಯ ವಿಚಾರಣೆ ಎಂ.ಎ.ಬಿ. ವಕೀಲರಿಂದ "ದಿ:1–9–2006ರಂದು ನಾನು ಸೊರಬದಿಂದ ಶಿರಾಳಕೊಪ್ಪಕ್ಕೆ ಹೋಗುತ್ತಿದ್ದೆ. ಒಬ್ಬ ವ್ಯಕ್ತಿ ಕೈ ಮಾಡಿ ನಿಲ್ಲಿಸಿ ತನ್ನ ಬಳಿ ಬಸ್‌ಛಾರ್ಜ್‌ಗೆ ಹಣವಿಲ್ಲ ಕರೆದುಕೊಂಡು ಹೋಗಿ ಎಂದು ಕೇಳಿದನು. 2–3 ಕಿ.ಮೀ. ಹೋದ ನಂತರ ರಸ್ತೆ ಪಕ್ಕದಲ್ಲಿ ಪೋಲೀಸ್ ಜೀಪ್ ನಿಂತಿದ್ದು ಅವರು ವಾಹನ ನಿಲ್ಲಿಸಿ ಚಾಲನಾ ಪರವಾನಿಗೆ ಕೇಳಿದರು. ನನ್ನ ಬಳಿ ಇರಲಿಲ್ಲ. ಆಗ ಹಿಂದುಗಡೆ ಇದ್ದವನು ಓಡಿ ಹೋದನು. ನಂತರ ಓಡಿ ಹೋದವನನ್ನು ಕರೆದುಕೊಂಡು ಬಂದರು. ನಂತರ ಕೇಸ್ ಬುಕ್ ಮಾಡಿ ನ್ಯಾಯಾಲಯಕ್ಕೆ ಹಾಜರುಪಡಿಸಿದರು. ನಂತರ ಕೇಸ್ ಖುಲಾಸೆ ಆಯಿತು. ನನ್ನ ವಾಹನವನ್ನು ಅರಣ್ಯ ಇಲಾಖೆಗೆ ಹಸ್ತಾಂತರಿಸಿದರು. ನಾನು ಯಾವುದೇ ಅಕ್ರಮ ಚಟುವಟಿಕೆಯಲ್ಲಿ ಭಾಗಿಯಾಗದ ನನ್ನ ವಾಹನವನ್ನು ಬಿಡುಗಡೆ ಮಾಡಲು ಕೋರುತ್ತೇನೆ.

ಪಾಟಿ ಸವಾಲು ಸ.ಸ.ಅ. ರವರಿಂದ "ನನ್ನ ವಾಹನದಲ್ಲಿ ಕುಳಿತು ಬಂದವನ ಹೆಸರು ಅರಣ್ಯ ಮೊಕದ್ದಮೆ ದಾಖಲಾದ ನಂತರ ತಿಳಿಯಿತು. ಅವರ ಹೆಸರು ಆನಂದ ಎಂದು. ನನ್ನ ಬೈಕ್‌ನಲ್ಲಿ ಹಿಂದೆ ಕುಳಿತವನ ಜೊತೆ ಒಂದು ಚೀಲ ಇತ್ತು ಎಂದರೆ ಗೊತ್ತಿಲ್ಲ. ನಾನು ಮತ್ತು ಅವನು ಸ್ನೇಹಿತರು ಎಂದರೆ ಸರಿಯಲ್ಲ. ಕ್ರಿಮಿನಲ್ ಪ್ರಕರಣದಲ್ಲಿ ಇಬ್ಬರೂ ಒಬ್ಬರೆ ವಕೀಲರನ್ನು ನೇಮಿಸಿದ್ದೆವೆ ಎಂದರೆ ಮೊಕದ್ದಮೆಯ ಪೂರ್ಣ ಖರ್ಚನ್ನು ಆನಂದ ನೋಡಿಕೊಂಡಿರುತ್ತಾನೆ. ಆದಿನ ನಾನು ಮತ್ತು ಆನಂದ ಬ್ಯಾಗಿನಲ್ಲಿ ಶ್ರೀಗಂಧ ಸಾಗಿಸುತ್ತಿದೆವು ಎಂದರೆ ಸರಿಯಲ್ಲ. ಸ್ಥಳದಲ್ಲಿ ಇಬ್ಬರನ್ನು ಪೋಲೀಸರು ಹಿಡಿದರು ಎಂದರೆ ಸರಿಯಲ್ಲ. ಸ್ಥಳದಲ್ಲಿ ಆದಿನ ಚೆಕ್ ಮಾಡಿದಾಗ ಶ್ರೀಗಂಧದ ಬ್ಯಾಗ್ ಇತ್ತು ಎಂದರೆ ಸರಿಯಲ್ಲ. ನಾನು ನನ್ನ ವಾಹನವನ್ನು ಬಿಡಿಸಿಕೊಳ್ಳುವ ಸಲುವಾಗಿ ಆನಂದ ನನ್ನ ಸ್ನೇಹಿತನಲ್ಲವೆಂದು ಸುಳ್ಳು ಸಾಕ್ಷಿ ಹೇಳುತ್ತಿದ್ದೇನೆಂದರೆ ಸರಿಯಲ್ಲ. ಆ ದಿನ ಇಬ್ಬರೂ ಸೇರಿ ಅಕ್ರಮ ಶ್ರೀಗಂಧ ಸಾಗಿಸುತ್ತಿದ್ದರೂ ಸಹ ಸುಳ್ಳು ಸಾಕ್ಷಿ ಹೇಳುತ್ತಿದ್ದೇನೆ ಎಂದರೆ ಸರಿಯಲ್ಲ".

ದಿ:30–07–2011 ಮತ್ತು 06–08–2011 ರಂದು ವಾದ ಮಂಡಿಸಲು ಡಿಫೆನ್ಸ್ ಕಡೆಯವರಿಗೆ ದಿನಾಂಕ ನೀಡಿದ್ದರು. ಯಾರು ವಿಚಾರಣೆಗೆ ಹಾಜರಾಗಿರುವುದಿಲ್ಲ. ಮುಂದಿನ ಹಂತಕ್ಕೆ ಕ್ರಮತೆಗೆದುಕೊಳ್ಳಲಾಯಿತು.

ಸಹಾಯಕ ಸರ್ಕಾರಿ ಅಭಿಯೋಜಕರು ದಿ: 06–08–2011ರಂದು ವಾದ ಮಂಡಿಸಿ, ಈ ವಾಹನದಲ್ಲಿ ಅರಣ್ಯ ಉತ್ಪನ್ನ ಕಳ್ಳ ಸಾಗಾಣಿಕೆ ಮಾಡುತ್ತಿರುವ ಸಮಯದಲ್ಲಿ ವಾಹನವನ್ನು ಅರಣ್ಯ ಉತ್ಪನ್ನದ ಸಮೇತ ಸಬ್‌ಇನ್ಸ್‌ಪೆಕ್ಟರ್ ಆಫ್ ಪೋಲೀಸ್, ಠಾಣೆ ಸೊರಬ ಇವರು ಜಪ್ತು ಮಾಡಿ ಪ್ರಥಮ ವರ್ತಮಾನ ವರದಿ, ಮಹಜರ್ ವರದಿಯನ್ನು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುತ್ತಾರೆ. ಆದ್ದರಿಂದ ಈ ವಾಹನದಲ್ಲಿ ಅರಣ್ಯ ಉತ್ಪನ್ನ ಕಳ್ಳ ಸಾಗಾಣಿಕೆ ಮಾಡಿದ ಬಗ್ಗೆ ಸಾಬೀತಾಗಿದೆ. ಆದ್ದರಿಂದ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದಲ್ಲಿ ವಾಸ್ತಾವಾಂಶ ಮತ್ತು ಕಾನೂನಿನ ವಸ್ತುಸ್ಥಿತಿ ಈ ಕೆಳಗಿನಂತಿದೆ.

1. ಆರ್.ಸಿ. ಮಾಲೀಕರು ಹಾಗೂ ಅರ್ಜಿದಾರರು ಹಿರೋಹೊಂಡಾ ಬೈಕ್ ಕೆಎ–15–ಜೆ–7174 ರಲ್ಲಿ ಅರಣ್ಯ ಉತ್ಪನ್ನವಾದ ಶ್ರೀಗಂಧ 7 ತುಂಡು 15 ಕೆ.ಜಿ.ಯನ್ನು ದಿ:01–09–2006ರಂದು ಅಕ್ರಮವಾಗಿ ಸಾಗಿಸಲು ಉಪಯೋಗಿಸಲಾಗಿತ್ತೇ? ಹಾಗೂ ಈ ರೀತಿ ಸಾಗಿಸುವ ಮುಖಾಂತರ ಅರಣ್ಯ ಅಪರಾಧವೆಸಗಿ ಕರ್ನಾಟಕ ಅರಣ್ಯ ಕಾಯಿದೆ ಮತ್ತು ನಿಯಮವನ್ನು ಉಲ್ಲಂಘಿಸಲಾಗಿದೆಯೇ?

2. ಕರ್ನಾಟಕ ಅರಣ್ಯ ವಿಧಿ 71(ಬಿ)(1)ರ ಪ್ರಕಾರ ವಾಹನದ ಮಾಲೀಕರಿಗೆ ಕಾರಣ ಕೇಳಿ ನೋಟಿಸ್ ನೀಡಲಾಗಿದೆಯೇ? ಹಾಗೂ ಮಾಲೀಕರವರಿಗೆ ಅವರ ಅಹವಾಲನ್ನು ಮಂಡಿಸಿ ಸಮರ್ಥಿಸಿಕೊಳ್ಳಲು ಸಾಕಷ್ಟು ಅವಕಾಶವನ್ನು ನೀಡಲಾಗಿದೆಯೇ?

3. ವಾಹನದ ಮಾಲೀಕರು ಅಥವಾ ಅವರ ವಾಹನ ಚಾಲಕನಾಗಲೀ ಅಥವಾ ಅವರ ಪ್ರತಿನಿಧಿಯಾಗಲೀ ಹಿರೋಹೊಂಡಾ ಬೈಕ್‌ನಲ್ಲಿ ಅಕ್ರಮವಾಗಿ ಸರ್ಕಾರದ ಸ್ವತ್ತಾದ ಶ್ರೀಗಂಧವನ್ನು ಸಾಗಿಸಲು ಶಾಮಿಲಾಗಿದ್ದಾರೆಯೇ? ಹಾಗೂ ಈ ವಾಹನವನ್ನು ಇಂತಹ ಅಕ್ರಮ ಕಾನೂನು ಬಾಹಿರ ಅರಣ್ಯ ಉತ್ಪನ್ನ ಸಾಗಾಣಿಕೆಗೆ ಉಪಯೋಗಿಸದಂತೆ ವಾಹನದ ಮಾಲೀಕರು, ವಾಹನದ ಚಾಲಕರು ಅಥವಾ ಅವರ ಪ್ರತಿನಿಧಿಗಳು ಸಾಕಷ್ಟು ಸೂಕ್ತ ಮುನ್ನೆಚ್ಚರಿಗೆ ತೆಗೆದುಕೊಂಡಿರುತ್ತಾರೆಯೇ?

4. ತೀರ್ಮಾನಕ್ಕೆ ಬರಬಹುದಾಗಿದೆ.

**ಈ ಮೇಲಿನ ಅಂಶಗಳಿಗೆ ಈ ಕೆಳಗಿನಂತೆ ಉತ್ತರಿಸಿ ಈ ಕೆಳಗಿನಂತೆ ತೀರ್ಮಾನಕ್ಕೆ ಬರಲಾಗಿದೆ, ಅದಕ್ಕೆ ಕಾರಣಗಳು ಈ ಕೆಳಗಿನಂತೆ ನೀಡಲಾಗಿದೆ.**

1. ಒಂದನೇ ಅಂಶಕ್ಕೆ ಹೌದು ಎಂತಲೂ

2. ಎರಡನೇ ಅಂಶಕ್ಕೆ ಹೌದು ಎಂತಲೂ

3. ಮೂರನೇ ಅಂಶದ ಮೊದಲ ಭಾಗದ ಪ್ರಶ್ನೆಗೆ ಹೌದು ಎಂತಲು ಎರಡನೇ ಭಾಗದ ಪ್ರಶ್ನೆಗೆ ಇಲ್ಲವೆಂಬುದಾಗಿರುತ್ತದೆ.

**ಅಂಶ–1:**

ದಿ:01–09–2006 ರಂದು ಪೊಲೀಸ್ ಸಬ್‌ಇನ್ಸ್‌ಪೆಕ್ಟರ್, ಸೊರಬ ಪೊಲೀಸ್ ಠಾಣೆ ಇವರು ಮತ್ತು ಸಿಬ್ಬಂದಿಯವರು ಮಧ್ಯಾಹ್ನ 1–00 ಗಂಟೆಗೆ ಸೊರಬ ತಾ॥ ಅಂಡಿಗೆ ಗ್ರಾಮದ ಅಂಬೇಡ್ಕರ್ ಕಾಲೋನಿ ಹತ್ತಿರ ಗಸ್ತು ತಿರುಗುತ್ತಿರುವಾಗ ಒಂದು ಹಿರೋಹೊಂಡಾ ಬೈಕ್ ಕೆಎ–15–ಜೆ–7174ರಲ್ಲಿ 2 ಜನ ಆಸಾಮಿಗಳು ಒಂದು ಪ್ಲಾಸ್ಟಿಕ್ ಚೀಲದಲ್ಲಿ ಶ್ರೀಗಂಧದ ತುಂಡುಗಳನ್ನು ಅಕ್ರಮವಾಗಿ ಸಾಗಿಸುತ್ತಿರುವ ಬಗ್ಗೆ ಪತ್ತೆಹಚ್ಚಿ ಆಸಾಮಿಗಳನ್ನು, ವಾಹನ ಹಾಗೂ ಅರಣ್ಯ ಉತ್ಪನ್ನವನ್ನು ಇಲಾಖಾ ಪರ ವಶಪಡಿಸಿಕೊಂಡು ಪ್ರಥಮ ವರ್ತಮಾನ ವರದಿ, ಮಹಜರ್ ವರದಿ ಸಾಕ್ಷಿಗಳ ಸಹಿಯೊಂದಿಗೆ ಈ ನ್ಯಾಯಾಲಯಕ್ಕೆ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಹಾಜರ್ಪಡಿಸಿರುತ್ತಾರೆ. ಇದರಿಂದ ಈ ವಾಹನದಲ್ಲಿ ಶ್ರೀಗಂಧವನ್ನು ಅಕ್ರಮವಾಗಿ ಸಾಗಿಸಲು ಉಪಯೋಗಿಸಿದ್ದರಿಂದ ಕರ್ನಾಟಕ ಅರಣ್ಯ ಕಾಯಿದೆ ಮತ್ತು ಕಾನೂನನ್ನು ಉಲ್ಲಂಘಿಸಿರುತ್ತಾರೆಂದು ನನ್ನ ಉತ್ತರವಾಗಿದೆ.

**ಅಂಶ–2:**

ಆರ್.ಸಿ. ಮಾಲೀಕರಾದ ಶ್ರೀ ಇಫ್ತಿಕರ್ ಅಹಮದ್ ಬಿನ್ ಹಸನಖಾನ್, 38 ವರ್ಷ, ಚಿಕ್ಕಜಂಬೂರು ಗ್ರಾಮ, ಶಿರಾಳಕೊಪ್ಪ, ಶಿಕಾರಿಪುರ ತಾ॥ ಇವರು ದಿ:13–10–2009 ರಂದು ಈ ನ್ಯಾಯಾಲಯಕ್ಕೆ ವಕೀಲರ ಮುಖಾಂತರ ಕ್ಲೇಮು ಅರ್ಜಿ ಸಲ್ಲಿಸಿರುತ್ತಾರೆ. 'ಬಿ' ಎಕ್ಸ್‌ಟ್ರ್ಯಾಕ್ಟ್‌ನಲ್ಲಿ ನಮೂದಿಸಿದಂತೆ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71ಬಿ (1)ರ ಪ್ರಕಾರ ಕಾರಣ ಕೇಳಿ ಪತ್ರವನ್ನು ದಿ:11–08–2010 ರಂದು ಅಂಚೆ ಮೂಲಕ ಜಾರಿ ಮಾಡಿದೆ. ನಂತರ ಡಿಫೆನ್ಸ್ ಕಡೆ ಸಾಕ್ಷಿ ಹೇಳಿಕೆ ನೀಡಿರುತ್ತಾರೆ. ಆದರೆ ವಾದವನ್ನು ಮಂಡಿಸಲು ದಿ:30–07–2011 ಮತ್ತು 06–08–2011 ರಂದು ದಿನಾಂಕ ನಿಗಧಿಪಡಿಸಿದ್ದರು, ಅರ್ಜಿದಾರರಾಗಲೀ ಅವರ ಪರ ವಕೀಲರಾಗಲೀ ನ್ಯಾಯಾಲಯಕ್ಕೆ ಹಾಜರಾಗಿರುವುದಿಲ್ಲ. ಇದರಿಂದ ಆರ್.ಸಿ. ಮಾಲೀಕರಿಗೆ ತಮ್ಮ ಅಹವಾಲನ್ನು ಮಂಡಿಸಲು ಈ ನ್ಯಾಯಾಲಯ ಬಹಳಷ್ಟು ಕಾಲಾವಕಾಶ ನೀಡಿದೆ ಎಂಬುದು ನನ್ನ ಉತ್ತರವಾಗಿದೆ.

**ಅಂಶ–3:**

ದಿ:01–09–2006 ರಂದು ಹಿರೋಹೊಂಡಾ ಬೈಕ್ ಕೆಎ–15–ಜೆ–7174ರಲ್ಲಿ ಶ್ರೀಗಂಧದ ತುಂಡು 15 ಕೆ.ಜಿ.ಯನ್ನು ಅಕ್ರಮವಾಗಿ ಸಾಗಿಸುತ್ತಿರುವಾಗ ಪೊಲೀಸ್ ಸಬ್‌ಇನ್ಸ್‌ಪೆಕ್ಟರ್, ಸೊರಬ ಪೊಲೀಸ್ ಠಾಣೆ ಇವರು ಪತ್ತೆಹಚ್ಚಿ ಪ್ರಥಮ ವರ್ತಮಾನ ವರದಿ, ಮಹಜರ್ ವರದಿಯನ್ನು ಸಾಕ್ಷಿಗಳ ಸಹಿಯೊಂದಿಗೆ ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುತ್ತಾರೆ. ಪ್ರಾಸಿಕ್ಯೂಷನ್ ಸಾಕ್ಷಿ ಹೇಳಿಕೆಗೂ ಮತ್ತು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿದ ದಾಖಲೆಗಳಿಗೂ ಒಂದಕ್ಕೊಂದು ತಾಳೆಯಾಗಿರುತ್ತದೆ. ಆರ್.ಸಿ. ಮಾಲೀಕರು ದಿ:13–10–2009 ರಂದು ಸಲ್ಲಿಸಿದ ಅರ್ಜಿಯಲ್ಲಿ ತಿಳಿಸಿದಂತೆ, ಅರ್ಜಿದಾರರು ಮುಗ್ದರೆನ್ನುವುದಕ್ಕಾಗಲೀ, ವಾಹನ ಮಾಲೀಕರ ಗಮನಕ್ಕೆ ಬಾರದೇ ಈ ಕೃತ್ಯ ನಡೆದಿದೆನ್ನುವುದಕ್ಕಾಗಲೀ, ಅಲ್ಲದೇ ಈ ಪ್ರಕರಣದಲ್ಲಿ ಅರ್ಜಿದಾರರು ಭಾಗಿಯಾಗಿಲ್ಲವೆನ್ನುವುದಕ್ಕಾಗಲೀ, ಈ ಬಗ್ಗೆ ಯಾವುದೇ ಸಾಕ್ಷ್ಯಾಧಾರಗಳನ್ನು ವಿಚಾರಣಾ ಸಮಯದಲ್ಲಿ ಈ ನ್ಯಾಯಾಲಯಕ್ಕೆ ಸಲ್ಲಿಸಿರುವುದಿಲ್ಲ.

ಅಲ್ಲದೇ, ವಾಹನ ಮಾಲೀಕರಾಗಲೀ, ಅವರ ಪರ ಚಾಲಕರಾಗಲೀ ಅಥವಾ ಅವರ ಪ್ರತಿನಿಧಿಗಳಾಗಲೀ ವಾಹನದಲ್ಲಿ ಕಳ್ಳ ಸಾಗಾಣಿಕೆಯಾಗದಂತೆ ಮುನ್ನಚ್ಚೆರಿಕೆ ಕ್ರಮವಹಿಸಬೇಕಾಗಿರುತ್ತದೆ. ಈ ಬಗ್ಗೆ ಗೌರವನ್ವಿತ ಮಾನ್ಯ ಉಚ್ಚ ನ್ಯಾಯಾಲಯ ಕರ್ನಾಟಕವು ಈ ಕೆಳಗಿನಂತೆ ಆದೇಶ ನೀಡಿರುವುದನ್ನು ಉಲ್ಲೇಖಿಸುತ್ತಾ,

The Hon'ble high Court of Karnataka Bangalore in the case of-Ramesh N. Dixit V/S State of Karnataka, 1987 (2) Kar.L.j.Sh.N.278:ILR 1985 Kar.2571 held that *"the owners required to show under sub-section (2) of section 71-B is that he, his agent, if any and the person in charge of the vehicle (In this case the driver) each, had taken all reasonable and necessary precautions against the misusing of the vehicle and that this offence had been committed without the knowledge or connivance any of them. ……………………………………………………………………………It is not merely enough if the*

*truck owner says that his truck had been misused without his knowledge or connivance, but in addition he is bound to show that he had taken all reasonable and necessary precautions against such misuse".*

ಅಲ್ಲದೇ ಈ ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಕಳ್ಳಸಾಗಾಣಿಕೆ ಮಾಡದಂತೆ ಆರ್.ಸಿ. ಮಾಲೀಕರಾಗಲೀ, ಅವರ ಪರ ವಾಹನ ಚಾಲಕರಾಗಲೀ ಮುನ್ನೆಚ್ಚರಿಕೆ ಕ್ರಮ ತೆಗೆದುಕೊಂಡ ಬಗ್ಗೆ ಯಾವುದೇ ಸಾಕ್ಷಧಾರಗಳನ್ನು ವಿಚಾರಣಾ ಸಮಯದಲ್ಲಿ ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುವುದಿಲ್ಲ.

**ಅಂಶ–4:**

ಈ ಮೇಲಿನ ಅಂಶಗಳನ್ನು ಸೂಕ್ಷ್ಮವಾಗಿ ಗಮನಿಸಿ ಮತ್ತು ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು, ವಾದವನ್ನು ಕೇಳಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಮನೋಜ್ ಕುಮಾರ್ ತ್ರಿಪಾಠಿ, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ) ಕಾಯಿದೆ ಪ್ರಕಾರ ಅರಣ್ಯ ಮೊಕದ್ದಮೆಯಲ್ಲಿ ಜಪ್ತು ಮಾಡಿದ ಹಿರೋಹೊಂಡಾ ಬೈಕ್ ಕೆಎ–15–ಜೆ–7174 ಮತ್ತು ಈ ವಾಹನದಲ್ಲಿ ಕರ್ನಾಟಕ ಸರ್ಕಾರದ ಸಂಪತ್ತು ಆದ ಶ್ರೀಗಂಧದ ತುಂಡು 15 ಕೆ.ಜಿ.ಯನ್ನು ಸರ್ಕಾರಕ್ಕೆ ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿ:20–08–2011 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30(ಮೂವತ್ತು) ದಿನಗಳ ಒಳಗಾಗಿ ಯಾರು ಮೇಲ್ಮನವಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ

**ಪಿ.ಆರ್. 981** ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

**ಜಿಲ್ಲಾಧಿಕಾರಿಗಳ ಕಾರ್ಯಾಲಯ ಶಿವಮೊಗ್ಗ ಜಿಲ್ಲೆ ಶಿವಮೊಗ್ಗ**

**ಅಧಿಸೂಚನೆ**

**ನಂ. ಚು(4)ಸಿಆರ್ 78/11–12 ದಿನಾಂಕ 28–01–12**

PLO-No. 9060

ಕರ್ನಾಟಕ ಪೌರಸಭೆಗಳ ಅಧಿನಿಯಮ 1964ರ ಕಲಂ 20 ಮತ್ತು ಕರ್ನಾಟಕ ಪೌರಸಭೆ (ಸದಸ್ಯರುಗಳ ಚುನಾವಣೆ) ನಿಯಮಗಳು 1977ರ ನಿಯಮ 66ರ ಮೇರೆಗೆ ವಿ. **ಪೊನ್ನುರಾಜ್,** ಜಿಲ್ಲಾಧಿಕಾರಿ, ಶಿವಮೊಗ್ಗ ಜಿಲ್ಲೆ. ಶಿವಮೊಗ್ಗ ಆದ ನಾನು ಸಾಗರ ನಗರಸಭೆಯ ವಾರ್ಡ್ ನಂ. 24ರ ಸದಸ್ಯರ ಮರಣದ ಕಾರಣದಿಂದ ತೆರವಾಗಿರುವ ಸ್ಥಾನಕ್ಕೆ ದಿನಾಂಕ 10–01–2012 ರಂದು ನಡೆದ ಉಪಚುನಾವಣೆ ಸಂಬಂಧದಲ್ಲಿ ಚುನಾಯಿಸಲ್ಪಟ್ಟ ಸದಸ್ಯರ ಹೆಸರನ್ನು ಮತ್ತು ಅವರು ಆಯ್ಕೆಗೊಂಡ ಸ್ಥಾನಗಳನ್ನು ಈ ಕೆಳಗಿನಂತೆ ಪ್ರಕಟಿಸಿರುತ್ತೇನೆ.

| ಕ್ರಮ ಸಂಖ್ಯೆ | ವಾರ್ಡಿನ ಸಂಖ್ಯೆ | ಸದಸ್ಯರ ಹೆಸರು ಮತ್ತು ವಿಳಾಸ | ಸ್ಥಾನ |
|---|---|---|---|
| 1 | 2 | 3 | 4 |
| **ಶ್ರೀಯುತರಾದ** | | | |
| 1 | ಸಾಗರ –24 | ತಸ್ರೀಫ್ ಬಿನ್ ಇಬ್ರಾಹಿಂ<br>ಜನ್ನತ್‌ನಗರ ಸಾಗರ. | ಸಾಮಾನ್ಯ |

**ವಿ.ಪೊನ್ನುರಾಜ್,**

ಜಿಲ್ಲಾಧಿಕಾರಿ, ಶಿವಮೊಗ್ಗ ಜಿಲ್ಲೆ ಶಿವಮೊಗ್ಗ.

**ಜಿಲ್ಲಾಧಿಕಾರಿಗಳ ಕಾರ್ಯಾಲಯ ಶಿವಮೊಗ್ಗ ಜಿಲ್ಲೆ ಶಿವಮೊಗ್ಗ**

**ಅಧಿಸೂಚನೆ**

**ನಂ. ಚು(4)ಸಿಆರ್ 86/11–12 (11029) ದಿನಾಂಕ 03–03–12**

ಕರ್ನಾಟಕ ಪೌರಸಭೆಗಳ ಅಧಿನಿಯಮ 1964ರ ಕಲಂ 20 ಮತ್ತು ಕರ್ನಾಟಕ ಪೌರಸಭೆ (ಸದಸ್ಯರುಗಳ ಚುನಾವಣೆ) ನಿಯಮಗಳು 1977ರ ನಿಯಮ 66ರ ಮೇರೆಗೆ **ಎಂ.ವಿ. ವೇದಮೂರ್ತಿ,** ಜಿಲ್ಲಾಧಿಕಾರಿ, ಶಿವಮೊಗ್ಗ ಜಿಲ್ಲೆ. ಶಿವಮೊಗ್ಗ ಆದ ನಾನು ಶಿವಮೊಗ್ಗ ನಗರಸಭೆಯ ವಾರ್ಡ್ ನಂ.

19ರ ಸದಸ್ಯರ ಮರಣದ ಕಾರಣದಿಂದಾಗಿ ತೆರವಾಗಿರುವ ಸ್ಥಾನಕ್ಕೆ ದಿನಾಂಕ 26–02–2012 ರಂದು ನಡೆದ ಉಪಚುನಾವಣೆ ಸಂಬಂಧದಲ್ಲಿ ಚುನಾಯಿಸಲ್ಪಟ್ಟ ಸದಸ್ಯರ ಹೆಸರನ್ನು ಮತ್ತು ಅವರು ಆಯ್ಕೆಗೊಂಡ ಸ್ಥಾನವನ್ನು ಈ ಕೆಳಗಿನಂತೆ ಪ್ರಕಟಿಸಿರುತ್ತೇನೆ.

| ಕ್ರಮ ಸಂಖ್ಯೆ | ವಾರ್ಡಿನ ಸಂಖ್ಯೆ ಮತ್ತು ಹೆಸರು | ಸದಸ್ಯರ ಹೆಸರು ಮತ್ತು ವಿಳಾಸ | ಸ್ಥಾನ |
|---|---|---|---|
| 1 | 2 | 3 | 4 |
| ಶ್ರೀಯುತರಾದ | | | |
| 1 | 19– ವೆಂಕಟೇಶ ನಗರ | ನಾಗರಾಜ ವೈ. ಕಂಕಾರಿ<br>ಬಿನ್ ಯಲ್ಲಪ್ಪ<br>5ನೇ ತಿರುವು,<br>ವೆಂಕಟೇಶನಗರ<br>ಜೈಲ್ ರಸ್ತೆ ಚಾನಲ್ ಬಲಭಾಗ ಶಿವಮೊಗ್ಗ. | ಹಿಂದುಳಿದ ವರ್ಗ ಎ |

**ಎಂ.ವಿ. ವೇದಮೂರ್ತಿ,**
ಜಿಲ್ಲಾಧಿಕಾರಿ, ಶಿವಮೊಗ್ಗ ಜಿಲ್ಲೆ ಶಿವಮೊಗ್ಗ.

## ಜಿಲ್ಲಾಧಿಕಾರಿಗಳ ಕಾರ್ಯಾಲಯ ಶಿವಮೊಗ್ಗ ಜಿಲ್ಲೆ ಶಿವಮೊಗ್ಗ

**ನಂ.ಚು.(4) ಸಿಆರ್ 85/11–12 ಶಿವಮೊಗ್ಗ ದಿನಾಂಕ :01–03–12.**

**ಅಧಿಸೂಚನೆ**

PLO No-10942

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ 1966ರ ಉಪಬಂಧಗಳ ಮತ್ತು ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ನಿಯಮಗಳು 1968ರ ನಿಯಮ 7ರ ಮೇರೆಗೆ ಜಿಲ್ಲಾಧಿಕಾರಿಗಳು ಶಿವಮೊಗ್ಗ ರವರ ಚುನಾವಣೆ ನೋಟೀಸು ಕ್ರಮಾಂಕ ಚು. (4)ಸಿಆರ್ 01/10–11 ದಿನಾಂಕ 05–04–2011ರಂತೆ ನಿಗದಿಪಡಿಸಿದ ಚುನಾವಣಾ ವೇಳಾಪಟ್ಟಿ ಪ್ರಕಾರ ಹಾಗೂ ಕೃಷಿ ಮಾರಾಟ ನಿರ್ದೇಶಕರು ಕೃಷಿ ಇಲಾಖೆ ಬೆಂಗಳೂರು ರವರ ಪತ್ರ ನಂ. ಕೃಮಾಇ/103 ಚುನಾವಣೆ/2011 ದಿನಾಂಕ 05–02–2011 ರ ಪ್ರಕಾರ ಶಿವಮೊಗ್ಗ ಜಿಲ್ಲೆಯ **ಶಿಕಾರಿಪುರ** ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ವಿವಿಧ ಕ್ಷೇತ್ರಗಳಿಂದ ಸದರಿ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ಸ್ಥಾನಗಳಿಗೆ ಚುನಾವಣೆಯನ್ನು ನಡೆಸಲಾಗಿದೆ. ದಿನಾಂಕ 27–04–2011ರಂದು ಮತ ಎಣಿಕೆಯ ಸಂದರ್ಭದಲ್ಲಿ ಬೇರೆ ಕೃಷಿಕರ ಕ್ಷೇತ್ರದ ಮತಪತ್ರಗಳು 3–ಸುಣ್ಣದಕೊಪ್ಪ ಕ್ಷೇತ್ರಕ್ಕೆ ಸೇರ್ಪಡೆಯಾಗಿರುವುದರಿಂದ ಶ್ರೀ ಮಂಜುನಾಥ್ ಎಂ.ಬಿ. ಎಂಬುವವರು ಕರ್ನಾಟಕ ಉಚ್ಛ ನ್ಯಾಯಾಲಯಕ್ಕೆ ದಾವೆಯನ್ನು ದಾಖಲಿಸಿರುತ್ತಾರೆ. ಮಾನ್ಯ ಕರ್ನಾಟಕ ಉಚ್ಛ ನ್ಯಾಯಾಲಯವು ತನ್ನ ಆದೇಶ ನಂ. WP No. 17098/2011 ದಿನಾಂಕ 15/10/11ರಂತೆ ಮತಗಳ ಎಣಿಕೆಯು ಯಾವ ಹಂತದಲ್ಲಿ ಸ್ಥಗಿತಗೊಂಡಿರುತ್ತದೆಯೋ ಅಲ್ಲಿಂದ ಮುಂದೆ ಮತಗಳ ಎಣಿಕೆಗೆ ಆದೇಶವನ್ನು ನೀಡಿದೆ. ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ನಿಯಮಗಳು 1968ರ ನಿಯಮ 37ರ ಪ್ರಕಾರ ಸದರಿ ಚುನಾವಣೆಯ ಫಲಿತಾಂಶವನ್ನು ಸಂಬಂಧಿಸಿದ ರಿಟರ್ನಿಂಗ್ ಅಧಿಕಾರಿಗಳು ಘೋಷಿಸಿರುತ್ತಾರೆ.

ಆದ್ದರಿಂದ ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ 1966 ಕಲಂ 27ರ ಮೇರೆಗೆ **ಎಂ.ವಿ. ವೇದಮೂರ್ತಿ,** ಜಿಲ್ಲಾಧಿಕಾರಿ, ಶಿವಮೊಗ್ಗ ಜಿಲ್ಲೆ ಶಿವಮೊಗ್ಗ ಆದ ನಾನು **ಶಿಕಾರಿಪುರ** ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ 3– ಸುಣ್ಣದಕೊಪ್ಪ ಕೃಷಿಕರ ಕ್ಷೇತ್ರದ ಸ್ಥಾನಕ್ಕೆ ಆಯ್ಕೆಯಾದ ಸದಸ್ಯರ ಹೆಸರನ್ನು ಮತ್ತು ಅವರು ಆಯ್ಕೆಗೊಂಡ ಸ್ಥಾನವನ್ನು ಈ ಕೆಳಗಿನಂತೆ ಪ್ರಕಟಿಸಿರುತ್ತೇನೆ.

| ಕ್ರಮ ಸಂಖ್ಯೆ | ಚುನಾವಣಾ ಕ್ಷೇತ್ರದ ಸಂಖ್ಯೆ ಮತ್ತು ಹೆಸರು | ಸದಸ್ಯರ ಹೆಸರು ಮತ್ತು ವಿಳಾಸ | ಸ್ಥಾನ |
|---|---|---|---|
| 1 | 3–ಸುಣ್ಣದಕೊಪ್ಪ | ಎಂ.ಬಿ.ಮಂಜುನಾಥ್<br>ಬಿನ್ ಬೂದ್ಯಪ್ಪಗೌಡ<br>ಕೋಡಿಕೊಪ್ಪ ಗ್ರಾಮ<br>ಶಿಕಾರಿಪುರ ತಾಲ್ಲೂಕು,<br>ಶಿವಮೊಗ್ಗ ಜಿಲ್ಲೆ. | ಸಾಮಾನ್ಯ |

**ಎಂ.ವಿ.ವೇದಮೂರ್ತಿ,**
ಜಿಲ್ಲಾಧಿಕಾರಿ, ಶಿವಮೊಗ್ಗ ಜಿಲ್ಲೆ ಶಿವಮೊಗ್ಗ

**ಪಿ.ಆರ್. 317**

**ಸಹಕಾರ ಸಂಘಗಳ ಜಂಟಿ ನಿಬಂಧಕರ ನ್ಯಾಯಾಲಯ, ಬೆಂಗಳೂರು ಪ್ರಾಂತ, ಚಾಮರಾಜಪೇಟೆ, ಬೆಂಗಳೂರು–18.**

**ದಾವಾ ಸಂಖ್ಯೆ: ಜೆಆರ್‌ಬಿ/ಡಿಐಎಸ್/498/1996–97**

**ಆದೇಶ ದಿನಾಂಕ: 30 ನೇ ಜನವರಿ 2012**

| ವಾದಿ: | ವಿರುದ್ಧ | ಪ್ರತಿವಾದಿ: |
|---|---|---|
| ವ್ಯವಸ್ಥಾಪಕ ನಿರ್ದೇಶಕರು,<br>ಬಿಡಿ ಅಂಡ್ ಬಿಆರ್‌ಆರ್‌ಡಿಸಿಸಿ ಬ್ಯಾಂಕ್ ನಿ.,<br>ಚಾಮರಾಜಪೇಟೆ, ಬೆಂಗಳೂರು– 560 018. | | 1. ಕಾರ್ಯದರ್ಶಿ,<br>ನವಕರ್ನಾಟಕ ಕ್ರೆಡಿಟ್ ಕೋ–ಆಪರೇಟಿವ್ ಸೊಸೈಟಿ ಲಿ., ನಂ.31/2, 1ನೇ ಮುಖ್ಯ ರಸ್ತೆ, 5ನೇ ಕ್ರಾಸ್, ಮಾರುತಿ ಬಡಾವಣೆ, ಶ್ರೀರಾಮಪುರಂ, ಬೆಂಗಳೂರು– 21.<br><br>2. ಶ್ರೀ ಶ್ರೀನಿವಾಸ, ಮೇಜರ್, ಅಧ್ಯಕ್ಷರು,<br>ನವಕರ್ನಾಟಕ ಕ್ರೆಡಿಟ್ ಕೋ–ಆಪರೇಟಿವ್ ಸೊಸೈಟಿ ಲಿ., ನಂ.31/2, 1ನೇ ಮುಖ್ಯ ರಸ್ತೆ, 5ನೇ ಕ್ರಾಸ್, ಮಾರುತಿ ಬಡಾವಣೆ, ಶ್ರೀರಾಮಪುರಂ, ಬೆಂಗಳೂರು– 21.<br><br>3. ಶ್ರೀ ಜಿ.ಪ್ರಶಾಂತ, ಮೇಜರ್, ಕಾರ್ಯದರ್ಶಿ,<br>ನವಕರ್ನಾಟಕ ಕ್ರೆಡಿಟ್ ಕೋ–ಆಪರೇಟಿವ್ ಸೊಸೈಟಿ ಲಿ., ನಂ.31/2, 1ನೇ ಮುಖ್ಯ ರಸ್ತೆ, 5ನೇ ಕ್ರಾಸ್, ಮಾರುತಿ ಬಡಾವಣೆ, ಶ್ರೀರಾಮಪುರಂ, ಬೆಂಗಳೂರು– 21.<br><br>4. ಶ್ರೀ ಕೆ.ಮುತ್ತುರಾಜ್, ಮೇಜರ್, ಉಪಾಧ್ಯಕ್ಷರು,<br>ನವಕರ್ನಾಟಕ ಕ್ರೆಡಿಟ್ ಕೋ–ಆಪರೇಟಿವ್ ಸೊಸೈಟಿ ಲಿ., ನಂ.31/2, 1ನೇ ಮುಖ್ಯ ರಸ್ತೆ, 5ನೇ ಕ್ರಾಸ್, ಮಾರುತಿ ಬಡಾವಣೆ, ಶ್ರೀರಾಮಪುರಂ, ಬೆಂಗಳೂರು– 21.<br><br>5. ಶ್ರೀ ಆರ್.ಕುಮಾರ್, ಮೇಜರ್, ನಿರ್ದೇಶಕರು,<br>ನವಕರ್ನಾಟಕ ಕ್ರೆಡಿಟ್ ಕೋ–ಆಪರೇಟಿವ್ ಸೊಸೈಟಿ ಲಿ., ನಂ.31/2, 1ನೇ ಮುಖ್ಯ ರಸ್ತೆ, 5ನೇ ಕ್ರಾಸ್, ಮಾರುತಿ ಬಡಾವಣೆ, ಶ್ರೀರಾಮಪುರಂ, ಬೆಂಗಳೂರು– 21.<br><br>6. ಶ್ರೀ ಬಿ.ವಿ.ಪ್ರವೀಣ್ ಕುಮಾರ್, ಮೇಜರ್, ನಿರ್ದೇಶಕರು,<br>ನವಕರ್ನಾಟಕ ಕ್ರೆಡಿಟ್ ಕೋ–ಆಪರೇಟಿವ್ ಸೊಸೈಟಿ ಲಿ., ನಂ.31/2, 1ನೇ ಮುಖ್ಯ ರಸ್ತೆ, 5ನೇ ಕ್ರಾಸ್, ಮಾರುತಿ ಬಡಾವಣೆ, ಶ್ರೀರಾಮಪುರಂ, ಬೆಂಗಳೂರು– 21.<br><br>7. ಶ್ರೀ ಟಿ.ಎಂ.ನಾಗರಾಜ್, ಮೇಜರ್, ನಿರ್ದೇಶಕರು,<br>ನವಕರ್ನಾಟಕ ಕ್ರೆಡಿಟ್ ಕೋ–ಆಪರೇಟಿವ್ ಸೊಸೈಟಿ ಲಿ., ನಂ.31/2, 1ನೇ ಮುಖ್ಯ ರಸ್ತೆ, 5ನೇ ಕ್ರಾಸ್, ಮಾರುತಿ ಬಡಾವಣೆ, ಶ್ರೀರಾಮಪುರಂ, ಬೆಂಗಳೂರು– 21..<br><br>8. ಶ್ರೀ ಹೆಚ್.ಆರ್.ಸುರೇಶ್, ಮೇಜರ್, ನಿರ್ದೇಶಕರು,<br>ನವಕರ್ನಾಟಕ ಕ್ರೆಡಿಟ್ ಕೋ–ಆಪರೇಟಿವ್ ಸೊಸೈಟಿ ಲಿ., ನಂ.31/2, 1ನೇ ಮುಖ್ಯ ರಸ್ತೆ, 5ನೇ ಕ್ರಾಸ್, ಮಾರುತಿ ಬಡಾವಣೆ, ಶ್ರೀರಾಮಪುರಂ, ಬೆಂಗಳೂರು– 21.<br><br>9. ಶ್ರೀ ಪಿ.ಎಸ್.ಹರಿಯಣ್ಣ ಗೌಡ, ಮೇಜರ್, ನಿರ್ದೇಶಕರು,<br>ನವಕರ್ನಾಟಕ ಕ್ರೆಡಿಟ್ ಕೋ–ಆಪರೇಟಿವ್ ಸೊಸೈಟಿ ಲಿ., ನಂ.31/2, 1ನೇ ಮುಖ್ಯ ರಸ್ತೆ, 5ನೇ ಕ್ರಾಸ್, ಮಾರುತಿ ಬಡಾವಣೆ, ಶ್ರೀರಾಮಪುರಂ, ಬೆಂಗಳೂರು– 21.<br><br>10. ಶ್ರೀ ಪಿ.ಎಸ್.ಪಾಪಣ್ಣ, ಮೇಜರ್, ನಿರ್ದೇಶಕರು,<br>ನವಕರ್ನಾಟಕ ಕ್ರೆಡಿಟ್ ಕೋ–ಆಪರೇಟಿವ್ ಸೊಸೈಟಿ ಲಿ., ನಂ.31/2, 1ನೇ ಮುಖ್ಯ ರಸ್ತೆ, 5ನೇ ಕ್ರಾಸ್, ಮಾರುತಿ ಬಡಾವಣೆ, ಶ್ರೀರಾಮಪುರಂ, ಬೆಂಗಳೂರು– 21<br><br>11. ಶ್ರೀಮತಿ ಟಿ.ಎಸ್.ಯಶೋಧ, ಮೇಜರ್, ನಿರ್ದೇಶಕರು,<br>ನವಕರ್ನಾಟಕ ಕ್ರೆಡಿಟ್ ಕೋ–ಆಪರೇಟಿವ್ ಸೊಸೈಟಿ ಲಿ., ನಂ.31/2, 1ನೇ ಮುಖ್ಯ ರಸ್ತೆ, 5ನೇ ಕ್ರಾಸ್, ಮಾರುತಿ ಬಡಾವಣೆ, ಶ್ರೀರಾಮಪುರಂ, ಬೆಂಗಳೂರು– 21. |

12. ಶ್ರೀ ವಿ.ಆನಂದ, ಮೇಜರ್, ನಿರ್ದೇಶಕರು,
ನವಕರ್ನಾಟಕ ಕ್ರೆಡಿಟ್ ಕೋ–ಆಪರೇಟಿವ್ ಸೊಸೈಟಿ ಲಿ., ನಂ.31/2,
1ನೇ ಮುಖ್ಯ ರಸ್ತೆ, 5ನೇ ಕ್ರಾಸ್, ಮಾರುತಿ ಬಡಾವಣೆ, ಶ್ರೀರಾಮಪುರಂ,
ಬೆಂಗಳೂರು– 21.

13. ಶ್ರೀ ಸೋಮಸುಂದರ, ಮೇಜರ್, ನಿರ್ದೇಶಕರು,
ನವಕರ್ನಾಟಕ ಕ್ರೆಡಿಟ್ ಕೋ–ಆಪರೇಟಿವ್ ಸೊಸೈಟಿ ಲಿ., ನಂ.31/2,
1ನೇ ಮುಖ್ಯ ರಸ್ತೆ, 5ನೇ ಕ್ರಾಸ್, ಮಾರುತಿ ಬಡಾವಣೆ, ಶ್ರೀರಾಮಪುರಂ,
ಬೆಂಗಳೂರು– 21.

14. ಶ್ರೀ ಹೆಚ್.ಬಿ.ಉಮೇಶ್, (ಮೃತಿ) ಅವರ ವಾರಸುದಾರರು.

14. 1ಎ. ಶ್ರೀಮತಿ ಹೆಚ್.ಎಸ್.ಹರಿಣಿ, ಕೋಂ: ಲೇಟ್: ಹೆಚ್.ಬಿ.ಉಮೇಶ್,

1ಬಿ. ಶ್ರೀ ಕೀರ್ತಿ ಕಂದಾ, ಬಿನ್: ಲೇಟ್: ಹೆಚ್.ಬಿ.ಉಮೇಶ್,

1ಸಿ. ಶ್ರೀ ಚರಣ್, ಬಿನ್: ಲೇಟ್: ಹೆಚ್.ಬಿ.ಉಮೇಶ್,

ವಿಳಾಸ :
ನಂ.112, ಐ.ಸಿ.ಎಸ್.ಸಿ. ಮೇನ್ ರೋಡ್, ನಾಗರಭಾವಿ, ಬೆಂಗಳೂರು–72.

15. ಶ್ರೀ ನಾರಾಯಣ ಗೌಡ, ಮೇಜರ್,
ಬಿನ್ ಪುಟ್ಟೇಗೌಡ, ಮಾಜಿ ಅಧ್ಯಕ್ಷರು ಹಾಗೂ ಈಗಿನ ನಿರ್ದೇಶಕರು,
ಬಿಡಿ ಅಂಡ್ ಬಿಆರ್ಆರ್‌ಡಿಸಿಸಿ ಬ್ಯಾಂಕ್ ನಿ., ಕೆರೆಲಾಲುಸಂದ್ರ,
ಮಳಗಳು ಪೋಸ್ಟ್, ಕಸಬಾ ಹೋಬಳಿ, ಕನಕಪುರ ತಾಲ್ಲೂಕು,
ಬೆಂಗಳೂರು (ಗ್ರಾ) ಜಿಲ್ಲೆ.

16. ಶ್ರೀ ಎಸ್.ಜಿ.ಚೆಲುವಯ್ಯ, ಮೇಜರ್, ಮಾಜಿ ಉಪಾಧ್ಯಕ್ಷರು,
ಬಿಡಿ ಅಂಡ್ ಬಿಆರ್ಆರ್‌ಡಿಸಿಸಿ ಬ್ಯಾಂಕ್ ನಿ., ಸೊಂಡೆಕೊಪ್ಪ,
ಸೊಂಡೆಕೊಪ್ಪ ಪೋಸ್ಟ್, ನೆಲಮಂಗಲ ತಾ: ಬೆಂಗಳೂರು (ಗ್ರಾ) ಜಿಲ್ಲೆ.

17. ಶ್ರೀ ವಿ. ಚನ್ನಪ್ಪ, ಮೇಜರ್, ಮಾಜಿ ನಿರ್ದೇಶಕರು,
ಬಿಡಿ ಅಂಡ್ ಬಿಆರ್ಆರ್‌ಡಿಸಿಸಿ ಬ್ಯಾಂಕ್ ನಿ., ನೆರಳಘಟ್ಟ, ಅಣಬೆ ಪೋಸ್ಟ್,
ದೊಡ್ಡಬಳ್ಳಾಪುರ ತಾ: ಬೆಂಗಳೂರು (ಗ್ರಾ) ಜಿಲ್ಲೆ.

18. ಶ್ರೀ ಎ ನರಸಿಂಹಯ್ಯ, ಮೇಜರ್, ಮಾಜಿ ನಿರ್ದೇಶಕರು,
ಬಿಡಿ ಅಂಡ್ ಬಿಆರ್ಆರ್‌ಡಿಸಿಸಿ ಬ್ಯಾಂಕ್ ನಿ., ಗಂಟಿಗಾನಹಳ್ಳಿ ಪೋಸ್ಟ್,
ಕುರುವೇಗೆರೆ, ದೊಡ್ಡಬಳ್ಳಾಪುರ ತಾ: ಬೆಂಗಳೂರು (ಗ್ರಾ) ಜಿಲ್ಲೆ.

19. ಶ್ರೀ ಎನ್.ಎಸ್. ನರಸೇಗೌಡ, ಮೇಜರ್, ಮಾಜಿ ನಿರ್ದೇಶಕರು,
ಬಿಡಿ ಅಂಡ್ ಬಿಆರ್ಆರ್‌ಡಿಸಿಸಿ ಬ್ಯಾಂಕ್ ನಿ., ನಂ.692, 'ಎ' 8ನೇ ಮೇನ್,
3ನೇ ಸ್ಟೇಜ್, 3ನೇ ಬ್ಲಾಕ್, ಬಸವೇಶ್ವರನಗರ, ಬೆಂಗಳೂರು–79.

20. ಶ್ರೀ ಬಿ.ರಾಮಿ ರೆಡ್ಡಿ, ಮೇಜರ್, ಮಾಜಿ ವ್ಯವಸ್ಥಾಪಕ ನಿರ್ದೇಶಕರು,
ಬಿಡಿ ಅಂಡ್ ಬಿಆರ್ಆರ್‌ಡಿಸಿಸಿ ಬ್ಯಾಂಕ್ ನಿ., ನಂ.124, 'ಎ' ಪ್ಲೋರ್,
26ನೇ ಕ್ರಾಸ್, 6ನೇ ಬ್ಲಾಕ್, ಜಯನಗರ, ಬೆಂಗಳೂರು–20.

21. ಶ್ರೀ ಕೆ.ಟಿ.ವೆಂಕಟಸ್ವಾಮಿ, ಮೇಜರ್, ಮಾಜಿ ಶಾಖಾ ವ್ಯವಸ್ಥಾಪಕರು (ನಿವೃತ್ತ)
ಕೇಂದ್ರ ಕಛೇರಿ ಶಾಖೆ, ಬಿಡಿ ಅಂಡ್ ಬಿಆರ್ಆರ್‌ಡಿಸಿಸಿ ಬ್ಯಾಂಕ್ ನಿ.,
ನಂ.1013 ಇ, ಮೂಕಾಂಬಿಕ ಎ.ಆರ್. ಅವೆನ್ಯೂ, ನ್ಯೂ ತಿಪ್ಪಸಂದ್ರ,
ಬೆಂಗಳೂರು–75.

22. ಶ್ರೀ ಎಂ.ಹೊನ್ನಲಿಂಗೇಗೌಡ, ಮೇಜರ್, ಮಾಜಿ ಶಾಖಾ ವ್ಯವಸ್ಥಾಪಕರು
ಬಿಡಿ ಅಂಡ್ ಬಿಆರ್ಆರ್‌ಡಿಸಿಸಿ ಬ್ಯಾಂಕ್ ನಿ., ಯಶವಂತಪುರ ಶಾಖೆ,
ನಂ. 464, 10ನೇ ಇ ಮೇನ್ ರೋಡ್, 6ನೇ ಬ್ಲಾಕ್, ರಾಜಾಜಿನಗರ,
ಬೆಂಗಳೂರು–10.

23. ಶ್ರೀ ರಾಮಾಂಜನಪ್ಪ, ಮೇಜರ್, ಶಾಖಾ ಸೂಪರ್‌ವೈಸರ್,
(ಅಂಡರ್ ಸಸ್‌ಪೆನ್‌ಷನ್) ಬಿಡಿ ಅಂಡ್ ಬಿಆರ್ಆರ್‌ಡಿಸಿಸಿ ಬ್ಯಾಂಕ್ ನಿ.,
ಯಶವಂತಪುರ ಶಾಖೆ, ನಂ. 464, 10ನೇ ಇ ಮೇನ್ ರೋಡ್,
6ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು–10.

24. ಶ್ರೀ ರಾಮಕೃಷ್ಣ, ಮೇಜರ್, ಶಾಖಾ ವ್ಯವಸ್ಥಾಪಕರು, (ಅಂಡರ್ ಸಸ್‌ಪೆನ್‌ಷನ್) ಬಿಡಿ ಅಂಡ್ ಬಿಆರ್‌ಆರ್‌ಡಿಸಿಸಿ ಬ್ಯಾಂಕ್ ನಿ., (ಪ್ಲಾನಿಂಗ್ & ಡೆವಲಪ್‌ಮೆಂಟ್ ಶಾಖೆ) ನಂ.221, 5ನೇ ಕ್ರಾಸ್, 1ನೇ ಮೇನ್, 1ನೇ ಹಂತ, ಕೆ,ಹೆಚ್.ಬಿ. ಕಾಲೋನಿ., ಬಸವೇಶ್ವರನಗರ, ಬೆಂಗಳೂರು–79.

25. ಶ್ರೀ ರಂಗರಾಜು, ಜೂನಿಯರ್ ಅಸಿಸ್ಟೆಂಟ್, ಬಿಡಿ ಅಂಡ್ ಬಿಆರ್‌ಆರ್‌ಡಿಸಿಸಿ ಬ್ಯಾಂಕ್ ನಿ., ಯಶವಂತಪುರ ಶಾಖೆ ನಂ.466, 8ನೇ ಕ್ರಾಸ್, ಮಹಾಲಕ್ಷ್ಮೀ ಲೇಔಟ್, ಬೆಂಗಳೂರು–86.

26. ಶ್ರೀ ಎ.ಸಿ.ಲಕ್ಷ್ಮೀಕಾಂತ, ಕ್ಯಾಶಿಯರ್, ಬಿಡಿ ಅಂಡ್ ಬಿಆರ್‌ಆರ್‌ಡಿಸಿಸಿ ಬ್ಯಾಂಕ್ ನಿ., ಯಶವಂತಪುರ ಶಾಖೆ ನಂ.96, ಕಿರಣ್ ನಿಲಯ, 3ನೇ ಮೇನ್ ರೋಡ್, ಸರಸ್ವತಿ ಪುರ, ನಂದಿನಿ ಲೇಔಟ್, ಬೆಂಗಳೂರು–96.

27. ಶ್ರೀ ಹೆಚ್.ಎಲ್.ಶಿವಕುಮಾರ್, ಬಿನ್ ಲಕ್ಷ್ಮಣಗೌಡ, ಜೂನಿಯರ್ ಅಸಿಸ್ಟೆಂಟ್, ಬಿಡಿ ಅಂಡ್ ಬಿಆರ್‌ಆರ್‌ಡಿಸಿಸಿ ಬ್ಯಾಂಕ್ ನಿ., ಕೇಂದ್ರ ಕಛೇರಿ, ನಂ.32, 3ನೇ ಕ್ರಾಸ್, ವಿಠಲ್‌ನಗರ, ಚಾಮರಾಜಪೇಟೆ, ಬೆಂಗಳೂರು–18.

28. ಶ್ರೀ ಬಿ.ಎಸ್. ಅನಂತಮೂರ್ತಿ, ಪ್ರೋ : ಶ್ರೀಲಕ್ಷ್ಮೀ ಸಿಲ್ಕ್ ವೀವಿಂಗ್ ಫ್ಯಾಕ್ಟರಿ, ಶ್ರೀರಾಮಪುರಂ, ಬೆಂಗಳೂರು.

29. ಶ್ರೀ ಬಿ.ಎಸ್.ವೆಂಕಟೇಶ್, ನಂ.45/1, 11ನೇ ಕ್ರಾಸ್, 7ನೇ ಮೇನ್, ಶ್ರೀರಾಮಪುರಂ, ಬೆಂಗಳೂರು.

30. ಶ್ರೀ ಎಸ್.ಜಿ.ಗುಪ್ತಾ, ಕೇ : ನವಕರ್ನಾಟಕ ಕ್ರೆಡಿಟ್ ಕೋ–ಆಪರೇಟಿವ್ ಸೊಸೈಟಿ ಲಿ., ನಂ.31/2, 1ನೇ ಮುಖ್ಯ ರಸ್ತೆ, 5ನೇ ಕ್ರಾಸ್, ಮಾರುತಿ ಬಡಾವಣೆ, ಶ್ರೀರಾಮಪುರಂ, ಬೆಂಗಳೂರು– 21.

**"1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103 ರ ರೀತ್ಯಾ ಸ್ಥಿರಾಸ್ತಿಯನ್ನು ಆದೇಶಕ್ಕೆ ಮುನ್ನ ಜಪ್ತಿ ಮಾಡುವ ಸಲುವಾಗಿ ತಿಳುವಳಿಕೆ ನೋಟೀಸು"**

1. ವಾದಿಯು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 70 ರಡಿ ದಾವಾ ಅರ್ಜಿಯನ್ನು ಸಲ್ಲಿಸಿ 1 ರಿಂದ 30ನೇ ಪ್ರತಿವಾದಿಗಳಿಂದ ರೂ.4,36,78,537/– (ರೂ.ನಾಲ್ಕು ಕೋಟಿ ಮೂವತ್ತಾರು ಲಕ್ಷದ ಎಪ್ಪತ್ತೆಂಟು ಸಾವಿರ ಐದು ನೂರ ಮೂವತ್ತೇಳು ಮಾತ್ರ) ಗಳು ಹಾಗೂ ಈ ಮೊತ್ತಕ್ಕೆ ದಿನಾಂಕ:24–05–1996 ರಿಂದ ಸಾಲಿಯಾನ ಶೇ.22% ರಷ್ಟು ಬಡ್ಡಿ ದರದಂತೆ ಅಸಲು ಮತ್ತು ಬಡ್ಡಿ ವಸೂಲಾತಿಗಾಗಿ ದಾವೆಯನ್ನು ಹೂಡಿರುತ್ತಾರೆ. ಈ ದಾವೆಯನ್ನು ವಿಚಾರಣೆಗೆ ತೆಗೆದುಕೊಂಡು, ವಿಚಾರಣೆ ನಡೆಸಲಾಗುತ್ತಿದೆ. ಪ್ರಕರಣದ ವಿಚಾರಣಾ ಹಂತದಲ್ಲಿ ವಾದಿಯು ದಿನಾಂಕ:30–01–2012 ರಂದು ಪ್ರಮಾಣ ಪತ್ರದೊಂದಿಗೆ ಕಲಂ 103 ರಡಿ ಅರ್ಜಿಯನ್ನು ಸಲ್ಲಿಸಿ 18ನೇ ಪ್ರತಿವಾದಿಯ ಹೆಸರಿನಲ್ಲಿರುವ ಸ್ಥಿರಾಸ್ತಿಯನ್ನು ಆದೇಶ ಪೂರ್ವ ಜಪ್ತಿ ಆದೇಶ ಹೊರಡಿಸಬೇಕೆಂದು ಕೋರಿರುತ್ತಾರೆ.

2. ಅರ್ಜಿದಾರರು ಕಲಂ 103 ರ ಅರ್ಜಿ ಜೊತೆ ಸಲ್ಲಿಸಲಾಗಿರುವ ಪ್ರಮಾಣ ಪತ್ರದಲ್ಲಿ 1ನೇ ಪ್ರತಿವಾದಿ ಸಂಘದ ಆಡಳಿತ ಮಂಡಳಿಯನ್ನು ಸಹಕಾರ ಇಲಾಖೆಯು 1994ನೇ ಸಾಲಿನಲ್ಲಿ ರದ್ದು ಮಾಡಿರುತ್ತದೆ. ಈ ಆದೇಶವನ್ನು 1ನೇ ಪ್ರತಿವಾದಿ ಸಂಘವು ಗೌರವ ಉಚ್ಚ ನ್ಯಾಯಾಲಯದಲ್ಲಿ ಪ್ರಶ್ನಿಸಿದ್ದು, ರಿಟ್ ಅಪೀಲು ಸಂ.2218 ಮತ್ತು 2219 C/W/1991 ಹಾಗೂ 1992/1994 ಈ ರಿಟ್ ಅಪೀಲಿನನ್ವಯ ಗೌರವ ನ್ಯಾಯಾಲಯವು ಪ್ರತಿವಾದಿ 15 ರಿಂದ 19 ರವರುಗಳನ್ನು Government Nominées as Ad-Hoc Committee members to from bank administration till holding of new elelction on 02-12-1994 ಅದರನ್ವಯ ಸದರಿ ಅಡಾಕ್ ಕಮಿಟಿಯು ದಿನಾಂಕ: 13–05–1994 ರವರೆಗೆ ಕಾರ್ಯನಿರ್ವಹಿಸಿರುತ್ತದೆ. ಈ ಅವಧಿಯಲ್ಲಿ 18ನೇ ಪ್ರತಿವಾದಿಯು ನಿರ್ದೇಶಕರಾಗಿ ಕಾರ್ಯನಿರ್ವಹಿಸಿ ಈ ಅವಧಿಯಲ್ಲಿ ಸಾಲಗಳನ್ನು ಮಂಜೂರು ಮಾಡಿರುತ್ತಾರೆ. ಆದರೆ ಅಡಾಕ್ ಕಮಿಟಿಯು ವಾದಿ ಸಂಘದಲ್ಲಿ ರೂ.4,00,00,000/–ಕ್ಕೆ ದಿನಾಂಕ:15–04–1995 ರಂದು ಅರ್ಜಿ ಸಲ್ಲಿಸಿ ಸಾಲವನ್ನು ಪಡೆದಿರುತ್ತಾರೆ. ಆದರೆ ಈ ಸಾಲ ಮಂಜೂರಾತಿಯಲ್ಲಿ ಅಡಾಕ್ ಕಮಿಟಿಯು ಗೌರವ ಉಚ್ಚ ನ್ಯಾಯಾಲಯದ ಆದೇಶ ಸಂಘದ ಬೈಲಾ ಮತ್ತು ಸಾಲಗಳ ನಿಯಮ ಮತ್ತು ನಿಬಂಧನೆಗಳ ಉಲ್ಲಂಘನೆ ಮಾಡಿ, ಅರ್ಜಿದಾರ ಬ್ಯಾಂಕಿಗೆ ಸುಳ್ಳು ಮಾಹಿತಿ ನೀಡಿ ಮೋಸ ಮಾಡಿರುತ್ತಾರೆ. ಆದರೆ ಪ್ರಸ್ತುತ 1ನೇ ಪ್ರತಿವಾದಿ ಸಂಘವು ತನ್ನ ಕಾರ್ಯಚಟುವಟಿಕೆ ನಡೆಸದೇ ಇರುವಂತಹ ಸ್ಥಿತಿಯನ್ನು ತಲುಪಿರುತ್ತದೆ. ಮುಂದೆಯು ಸಹ ಕಾರ್ಯಚಟುವಟಿಕೆಗಳನ್ನು ನಡೆಸುವ ಸಾಧ್ಯತೆ ಇಲ್ಲವೆಂದು ಮನಗಂಡು ಕಲಂ 70 ರಡಿಯಲ್ಲಿ ದಾವೆಯನ್ನು ಹೂಡಲಾಗಿದೆ. ಈ ಎಲ್ಲಾ ಅವ್ಯವಹಾರಕ್ಕೆ ಅಡಾಕ್ ಕಮಿಟಿಯ ಸದಸ್ಯರು ಮತ್ತು ಬ್ಯಾಂಕಿನ ನೌಕರರು ಒಳಗೂಡಿ ವೈಯಕ್ತಿಕವಾಗಿ ಮತ್ತು ಜಂಟಿಯಾಗಿ ಅವ್ಯವಹಾರ ನಡೆಸಿ ಅರ್ಜಿದಾರ ಬ್ಯಾಂಕಿನ ಸಾಲದ ಮೊತ್ತವನ್ನು ಉಪಯೋಗಿಸಿಕೊಂಡು ನಂತರ ಬ್ಯಾಂಕಿಗೆ ನಷ್ಟ ಉಂಟಾಗಲು ಕಾರಣ ಕರ್ತರಾಗಿರುತ್ತಾರೆ. ಈ ಹಿನ್ನಲೆಯಲ್ಲಿ ದಾವೆಗಳನ್ನು ಹೂಡಲಾಗಿದೆ. ಆದರೆ ಈ ದಾವೆ ಇತ್ಯರ್ಥವಾಗುವಲ್ಲಿ ಕಾನೂನು ರೀತ್ಯಾ ನಡವಳಿಕೆಗಳು ನಡೆಸಿ

ಇತ್ಯರ್ಥಪಡಿಸುವಲ್ಲಿ ಸಮಯಾವಕಾಶ ತೆಗೆದುಕೊಳ್ಳುತ್ತಿದ್ದು, ಈ ಮಧ್ಯ ಪ್ರತಿವಾದಿಗಳು ತಮ್ಮ ಹೆಸರಿನಲ್ಲಿರುವ ಸ್ಥಿರಾಸ್ತಿಗಳನ್ನು ಮಾರಾಟ ಮಾಡುವ ಸಾಧ್ಯತೆಗಳಿರುತ್ತವೆ. ಒಂದು ವೇಳೆ ಈ ರೀತಿ ಪ್ರತಿವಾದಿಗಳು ತಮ್ಮ ಹೆಸರಿನಲ್ಲಿರುವ ಸ್ಥಿರಾಸ್ತಿಗಳನ್ನು ಮಾರಾಟ ಮಾಡಿದ ಪಕ್ಷದಲ್ಲಿ ಈ ದಾವೆಯ ಅಂತಿಮ ಆದೇಶ ಅರ್ಜಿದಾರ ಬ್ಯಾಂಕಿನ ಪರವಾಗಿ ಬಂದರೂ ಸಹ ಅವಾರ್ಡ್ ಮೊತ್ತವನ್ನು ವಸೂಲಿ ಮಾಡಿಕೊಳ್ಳಲು ಸಾಧ್ಯವಾಗದ ಪರಿಸ್ಥಿತಿ ಉಂಟಾಗುವ ಸಾಧ್ಯತೆ ಇರುವುದರಿಂದ ಕಲಂ 103 ರಡಿಯಲ್ಲಿ ಸಲ್ಲಿಸಲಾಗಿರುವ ಅರ್ಜಿ ಆಧಾರಿತ 18ನೇ ಪ್ರತಿವಾದಿಗೆ ಸೇರಿದ ಸ್ಥಿರಾಸ್ತಿಗಳನ್ನು ಆದೇಶಕ್ಕೆ ಪೂರ್ವ ಜಪ್ತಿ ಆದೇಶ ಹೊರಡಿಸಬೇಕೆಂದು ಕೋರಿರುತ್ತಾರೆ.

3. ವಾದಿಯು ಕಲಂ 103 ರಡಿಯಲ್ಲಿ ಸಲ್ಲಿಸಿರುವ ಅರ್ಜಿಯಲ್ಲಿ ತಿಳಿಸಿರುವ ಸ್ಥಿರಾಸ್ತಿಗಳ ದಾಖಲಾತಿಗಳನ್ನು ಪರಿಶೀಲಿಸಲಾಗಿ ಈ ಸ್ಥಿರಾಸಿಯು 18ನೇ ಪ್ರತಿವಾದಿಯ ಹೆಸರಿಗೆ ಇರುವುದು ಕಂಡು ಬಂದಿರುತ್ತದೆ. ಈ ಸಂಬಂಧವಾಗಿ ವಾದಿಯು ಸಲ್ಲಿಸಲಾಗಿರುವ ಪ್ರಮಾಣ ಪತ್ರದಲ್ಲಿ ತಿಳಿಸಲಾಗಿರುವ ಅಂಶಗಳನ್ನು ಪರಿಶೀಲಿಸಲಾಗಿ 18ನೇ ಪ್ರತಿವಾದಿಯ ಹೆಸರಿಗೆ ಸೇರಿದ ಸ್ಥಿರಾಸ್ತಿಯನ್ನು ಕಲಂ 103 ರಡಿ ಜಪ್ತಿ ಮಾಡುವುದು ಅವಶ್ಯಕ ಮತ್ತು ಸೂಕ್ತವೆಂದು ಅಭಿಪ್ರಾಯ ಪಡುತ್ತಾ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**"ಆದೇಶ"**

ಮೇಲೆ ತಿಳಿಸಿರುವ ಅಂಶಗಳ ಹಿನ್ನಲೆಯಲ್ಲಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 70 ಮತ್ತು ಕಲಂ 103 ಹಾಗೂ ಸರ್ಕಾರದ ಅಧಿಸೂಚನೆ ಸಂ.ಸಿಓ/139/ಸಿಎಂಎಲ್/2010 ದಿನಾಂಕ:17–02–2011 ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ ಸಿ.ಎಸ್.ವಿರೇಶ್, ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ಆದ ನಾನು 18ನೇ ಪ್ರತಿವಾದಿಯ ಹೆಸರಿನಲ್ಲಿರುವ ಈ ಕೆಳಗಿನ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಷರತ್ತಿಗೊಳಪಟ್ಟು ಈ ಪ್ರಕರಣದ ಅಂತಿಮ ತೀರ್ಪಿಗೆ ಪೂರ್ವ ಜಪ್ತಿ ಆದೇಶ ಹೊರಡಿಸಿರುತ್ತೇನೆ.

18ನೇ ಪ್ರತಿವಾದಿಗಳು ಒಂದು ವೇಳೆ ಈ ಜಪ್ತಿ ಪೂರ್ವ ಆದೇಶದಲ್ಲಿ ತಿಳಿಸಿರುವ ಯಾವುದೇ ಸ್ಥಿರಾಸ್ತಿಯನ್ನು/ ಸ್ಥಿರಾಸ್ತಿಯ ಭಾಗವನ್ನು ಈ ಆದೇಶದಿಂದ ಮುಕ್ತ ಮಾಡಿಸಿಕೊಳ್ಳಲು ಇಚ್ಚಿಸಿದಲ್ಲಿ ಈ ದಾವಾ ಅರ್ಜಿಯಲ್ಲಿ ವಾದಿಯು ಕ್ಲೈಂ ಮಾಡಿರುವ ಮೊತ್ತ ರೂ.4,36,78,537/– (ರೂ.ನಾಲ್ಕು ಕೋಟಿ ಮೂವತ್ತಾರು ಲಕ್ಷದ ಎಪ್ಪತ್ತೆಂಟು ಸಾವಿರ ಐದು ನೂರ ಮೂವತ್ತೇಳು ಮಾತ್ರ) ಗಳನ್ನು ವಾದಿ ಬ್ಯಾಂಕಿನಲ್ಲಿ ಅಮಾನತ್ತು ಖಾತೆಗೆ ಈ ಆದೇಶ ಹೊರಡಿಸಿದ 30 ದಿವಸದೊಳಗಾಗಿ ಜಮಾ ಮಾಡಿ ಅಧಿಕೃತ ಚಲನ್/ರಸೀದಿಯನ್ನು ಹಾಜರುಪಡಿಸಿದಲ್ಲಿ ಈ ಆದೇಶದಲ್ಲಿ ತಿಳಿಸಿರುವ ಷೆಡ್ಯೂಲ್ ಸ್ವತ್ತನ್ನು ಮುಕ್ತಗೊಳಿಸುವ ಷರತ್ತಿಗೆ ಒಳಪಟ್ಟಿರುತ್ತದೆ.

ಒಂದು ವೇಳೆ 18ನೇ ಪ್ರತಿವಾದಿಯು ಮೇಲೆ ತಿಳಿಸಿರುವಂತೆ ಈ ಆದೇಶ ಹೊರಡಿಸಿದ 30 ದಿವಸಗಳೊಳಗಾಗಿ ಅವಶ್ಯಕವಿರುವ ನಗದು ಭದ್ರತೆಯನ್ನು ನೀಡಲು ವಿಫಲರಾದಲ್ಲಿ ಈ ಆದೇಶ ಪೂರ್ವ ಜಪ್ತಿ ಆದೇಶವನ್ನು ಸ್ಥಿರೀಕರಿಸಲಾಗುವುದು.

ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಖರೀದಿಸುವಲ್ಲಿ ಆಸಕ್ತಿ ಹೊಂದಿರುವ ಯಾವುದೇ ವ್ಯಕ್ತಿಗಳಿಗೆ ಈ ಆಸ್ತಿ ಪೂರ್ವ ಜಪ್ತಿ ಆದೇಶವು ಒಳಪಟ್ಟಿರುತ್ತದೆ.

**"ಷೆಡ್ಯೂಲ್ ಆಸ್ತಿ ವಿವರಗಳು"**

1. All that piece and parcel of the agricultural properties bearing Sy No.48/2, measuring 0.14 Guntas, Sy No.81, measuring 5 acres 15 Guntas, Sy No.75/5, measuring 1 acres 37 Guntas, Sy No.75/2, measuring 1 acres 10 Guntas, Sy No.70/1, measuring 1 acres 12 Guntas, in total 10 acres 08 Guntas with commons boundaries, situated at Kuruvigere Village, Thobagere Hobli, Doddaballapura Taluk, Bangalore Rural District and Bounded on.

| | |
|---|---|
| East by : | Road |
| West by : | Property belongs to Munishettappa |
| North by : | Property belongs to Muni Anjanappa |
| South by : | Property belongs to Munishettappa |

2. All that piece and parcel of the agricultural properties bearing Sy No.65/1, measuring 0.16 Guntas, Sy No.64/2, measuring 1 acres 20 Guntas, Sy No.64/1, measuring 05 Guntas, in total 2 acres 01 Guntas with commons boundaries, situated at Kuruvigere Village, Thobagere Hobli, Doddaballapura Taluk, Bangalore Rural District and Bounded on.

| | |
|---|---|
| East by : | Road |
| West by : | Property belongs to Krishnappa |
| North by : | Property belongs to Ramaiah |
| South by : | Property belongs to Krishnappa |

3. All that piece and parcel of the agricultural properties bearing Sy No.57/7, measuring 0.03 Guntas, Sy No.57/15, measuring 01 Guntas, in total 04 Guntas with commons boundaries, situated at Kuruvigere Village, Thobagere Hobli, Doddaballapura Taluk, Bangalore Rural District and Bounded on.

| | |
|---|---|
| East by : | Property belongs to Channappa |
| West by : | Road |
| North by : | Property belongs to Channappa |
| South by : | Road |

4. All that piece and parcel of the agricultural properties bearing Sy No.26/2, measuring 2 acres 10 Guntas, Sy No.26/1, measuring 2 acres 08 Guntas, Sy No.26/3, measuring 3 acres 07 Guntas, Sy No.26/4, measuring 04 Guntas, Sy No.27/2, measuring 2 acres 05 Guntas, in total 09 acres 34 Guntas with commons boundaries, situated at Kuruvigere Village, Thobagere Hobli, Doddaballapura Taluk, Bangalore Rural District and Bounded on.

| | |
|---|---|
| East by : | Property belongs to Byranna |
| West by : | Road |
| North by : | Property belongs to Narasappa |
| South by : | Property belongs to Venkatesh |

5. All that piece and parcel of the agricultural properties bearing Sy No.1/1c measuring 0.03 Guntas, Sy No./1A, measuring 16 Guntas, in total 19 Guntas with commons boundaries, situated at Kuruvigere Village, Thobagere Hobli, Doddaballapura Taluk, Bangalore Rural District and Bounded on.

| | |
|---|---|
| East by : | Private property |
| West by : | Road |
| North by : | Private Property |
| South by : | Private Property |

6. All that piece and parcel of the agricultural properties bearing Sy No.58/5, measuring 0.03 Guntas, Sy No.58/15, measuring 04 Guntas, Sy No.58/13, measuring 04 Guntas, Sy No.58/7, measuring 04 Guntas, in total 15 Guntas with commons boundaries, situated at Kuruvigere Village, Thobagere Hobli, Doddaballapura Taluk, Bangalore Rural District and Bounded on.

| | |
|---|---|
| East by : | Road |
| West by : | Property belongs to Byregowda |
| North by : | Property belongs to Road |
| South by : | Property belongs to Veeranna |

ಈ ಆದೇಶವನ್ನು ನನ್ನ ಸಹಿ ಹಾಗೂ ಕಛೇರಿ ಮೊಹರು ನಿಶೆಯೊಂದಿಗೆ ಈ ದಿನ ಅಂದರೆ ದಿನಾಂಕ: 30-01-2012 ರಂದು ಹೊರಡಿಸಿರುತ್ತೇನೆ.

ಸಿ.ಎಸ್. ವೀರೇಶ್
ಸಹಕಾರ ಸಂಘಗಳ ಜಂಟಿ ನಿಬಂಧಕರು,
ಬೆಂಗಳೂರು ಪ್ರಾಂತ, ಬೆಂಗಳೂರು.

ಪಿ.ಆರ್. 167

**ಸಹಕಾರ ಸಂಘಗಳ ಜಂಟಿ ನಿಬಂಧಕರ ನ್ಯಾಯಾಲಯ, ಬೆಂಗಳೂರು ಪ್ರಾಂತ, ಚಾಮರಾಜಪೇಟೆ, ಬೆಂಗಳೂರು-18.**

**ದಾವಾ ಸಂಖ್ಯೆ: ಜೆಆರ್‌ಬಿ/ಡಿಐಎಸ್/498/1996-97**

**ಆದೇಶ ದಿನಾಂಕ:30 ನೇ ಜನವರಿ 2012**

| ವಾದಿ: | ವಿರುದ್ಧ | ಪ್ರತಿವಾದಿ: |
|---|---|---|
| ವ್ಯವಸ್ಥಾಪಕ ನಿರ್ದೇಶಕರು,<br>ಬಿಡಿ ಅಂಡ್ ಬಿಆರ್‌ಆರ್‌ಡಿಸಿಸಿ ಬ್ಯಾಂಕ್ ನಿ., ಚಾಮರಾಜಪೇಟೆ,<br>ಬೆಂಗಳೂರು- 560 018. | | |

1. ಕಾರ್ಯದರ್ಶಿ,
   ನವಕರ್ನಾಟಕ ಕ್ರೆಡಿಟ್ ಕೋ-ಆಪರೇಟಿವ್ ಸೊಸೈಟಿ ಲಿ., ನಂ.31/2,
   1ನೇ ಮುಖ್ಯ ರಸ್ತೆ, 5ನೇ ಕ್ರಾಸ್, ಮಾರುತಿ ಬಡಾವಣೆ, ಶ್ರೀರಾಮಪುರಂ,
   ಬೆಂಗಳೂರು- 21.
2. ಶ್ರೀ ಶ್ರೀನಿವಾಸ, ಮೇಜರ್, ಅಧ್ಯಕ್ಷರು,
   ನವಕರ್ನಾಟಕ ಕ್ರೆಡಿಟ್ ಕೋ-ಆಪರೇಟಿವ್ ಸೊಸೈಟಿ ಲಿ., ನಂ.31/2,
   1ನೇ ಮುಖ್ಯ ರಸ್ತೆ, 5ನೇ ಕ್ರಾಸ್, ಮಾರುತಿ ಬಡಾವಣೆ, ಶ್ರೀರಾಮಪುರಂ,
   ಬೆಂಗಳೂರು- 21.
3. ಶ್ರೀ ಜಿ.ಪ್ರಶಾಂತ, ಮೇಜರ್, ಕಾರ್ಯದರ್ಶಿ,
   ನವಕರ್ನಾಟಕ ಕ್ರೆಡಿಟ್ ಕೋ-ಆಪರೇಟಿವ್ ಸೊಸೈಟಿ ಲಿ., ನಂ.31/2,
   1ನೇ ಮುಖ್ಯ ರಸ್ತೆ, 5ನೇ ಕ್ರಾಸ್, ಮಾರುತಿ ಬಡಾವಣೆ, ಶ್ರೀರಾಮಪುರಂ,
   ಬೆಂಗಳೂರು- 21.
4. ಶ್ರೀ ಕೆ.ಮುತ್ತುರಾಜ್, ಮೇಜರ್, ಉಪಾಧ್ಯಕ್ಷರು,
   ನವಕರ್ನಾಟಕ ಕ್ರೆಡಿಟ್ ಕೋ-ಆಪರೇಟಿವ್ ಸೊಸೈಟಿ ಲಿ., ನಂ.31/2,
   1ನೇ ಮುಖ್ಯ ರಸ್ತೆ, 5ನೇ ಕ್ರಾಸ್, ಮಾರುತಿ ಬಡಾವಣೆ, ಶ್ರೀರಾಮಪುರಂ,
   ಬೆಂಗಳೂರು- 21.
5. ಶ್ರೀ ಆರ್.ಕುಮಾರ್, ಮೇಜರ್, ನಿರ್ದೇಶಕರು,
   ನವಕರ್ನಾಟಕ ಕ್ರೆಡಿಟ್ ಕೋ-ಆಪರೇಟಿವ್ ಸೊಸೈಟಿ ಲಿ., ನಂ.31/2,
   1ನೇ ಮುಖ್ಯ ರಸ್ತೆ, 5ನೇ ಕ್ರಾಸ್, ಮಾರುತಿ ಬಡಾವಣೆ, ಶ್ರೀರಾಮಪುರಂ,
   ಬೆಂಗಳೂರು- 21.
6. ಶ್ರೀ ಬಿ.ವಿ.ಪ್ರವೀಣ್ ಕುಮಾರ್, ಮೇಜರ್, ನಿರ್ದೇಶಕರು,
   ನವಕರ್ನಾಟಕ ಕ್ರೆಡಿಟ್ ಕೋ-ಆಪರೇಟಿವ್ ಸೊಸೈಟಿ ಲಿ., ನಂ.31/2,
   1ನೇ ಮುಖ್ಯ ರಸ್ತೆ, 5ನೇ ಕ್ರಾಸ್, ಮಾರುತಿ ಬಡಾವಣೆ, ಶ್ರೀರಾಮಪುರಂ,
   ಬೆಂಗಳೂರು- 21.
7. ಶ್ರೀ ಟಿ.ಎಂ.ನಾಗರಾಜ್, ಮೇಜರ್, ನಿರ್ದೇಶಕರು,
   ನವಕರ್ನಾಟಕ ಕ್ರೆಡಿಟ್ ಕೋ-ಆಪರೇಟಿವ್ ಸೊಸೈಟಿ ಲಿ., ನಂ.31/2,
   1ನೇ ಮುಖ್ಯ ರಸ್ತೆ, 5ನೇ ಕ್ರಾಸ್, ಮಾರುತಿ ಬಡಾವಣೆ, ಶ್ರೀರಾಮಪುರಂ,
   ಬೆಂಗಳೂರು- 21.
8. ಶ್ರೀ ಹೆಚ್.ಆರ್.ಸುರೇಶ್, ಮೇಜರ್, ನಿರ್ದೇಶಕರು,
   ನವಕರ್ನಾಟಕ ಕ್ರೆಡಿಟ್ ಕೋ-ಆಪರೇಟಿವ್ ಸೊಸೈಟಿ ಲಿ., ನಂ.31/2,
   1ನೇ ಮುಖ್ಯ ರಸ್ತೆ, 5ನೇ ಕ್ರಾಸ್, ಮಾರುತಿ ಬಡಾವಣೆ, ಶ್ರೀರಾಮಪುರಂ,
   ಬೆಂಗಳೂರು- 21.
9. ಶ್ರೀ ಪಿ.ಎಸ್.ಹರಿಯಣ್ಣ ಗೌಡ, ಮೇಜರ್, ನಿರ್ದೇಶಕರು,
   ನವಕರ್ನಾಟಕ ಕ್ರೆಡಿಟ್ ಕೋ-ಆಪರೇಟಿವ್ ಸೊಸೈಟಿ ಲಿ., ನಂ.31/2,
   1ನೇ ಮುಖ್ಯ ರಸ್ತೆ, 5ನೇ ಕ್ರಾಸ್, ಮಾರುತಿ ಬಡಾವಣೆ, ಶ್ರೀರಾಮಪುರಂ,
   ಬೆಂಗಳೂರು- 21.
10. ಶ್ರೀ ಪಿ.ಎಸ್.ಪಾಪಣ್ಣ, ಮೇಜರ್, ನಿರ್ದೇಶಕರು,
    ನವಕರ್ನಾಟಕ ಕ್ರೆಡಿಟ್ ಕೋ-ಆಪರೇಟಿವ್ ಸೊಸೈಟಿ ಲಿ., ನಂ.31/2,
    1ನೇ ಮುಖ್ಯ ರಸ್ತೆ, 5ನೇ ಕ್ರಾಸ್, ಮಾರುತಿ ಬಡಾವಣೆ, ಶ್ರೀರಾಮಪುರಂ,
    ಬೆಂಗಳೂರು- 21.
11. ಶ್ರೀಮತಿ ಟಿ.ಎಸ್.ಯಶೋಧ, ಮೇಜರ್, ನಿರ್ದೇಶಕರು,
    ನವಕರ್ನಾಟಕ ಕ್ರೆಡಿಟ್ ಕೋ-ಆಪರೇಟಿವ್ ಸೊಸೈಟಿ ಲಿ., ನಂ.31/2,
    1ನೇ ಮುಖ್ಯ ರಸ್ತೆ, 5ನೇ ಕ್ರಾಸ್, ಮಾರುತಿ ಬಡಾವಣೆ, ಶ್ರೀರಾಮಪುರಂ,
    ಬೆಂಗಳೂರು- 21.

12. ಶ್ರೀ ವಿ.ಆನಂದ, ಮೇಜರ್, ನಿರ್ದೇಶಕರು,
ನವಕರ್ನಾಟಕ ಕ್ರೆಡಿಟ್ ಕೋ–ಆಪರೇಟಿವ್ ಸೊಸೈಟಿ ಲಿ., ನಂ.31/2,
1ನೇ ಮುಖ್ಯ ರಸ್ತೆ, 5ನೇ ಕ್ರಾಸ್, ಮಾರುತಿ ಬಡಾವಣೆ, ಶ್ರೀರಾಮಪುರಂ,
ಬೆಂಗಳೂರು– 21.

13. ಶ್ರೀ ಸೋಮಸುಂದರ, ಮೇಜರ್, ನಿರ್ದೇಶಕರು,
ನವಕರ್ನಾಟಕ ಕ್ರೆಡಿಟ್ ಕೋ–ಆಪರೇಟಿವ್ ಸೊಸೈಟಿ ಲಿ., ನಂ.31/2,
1ನೇ ಮುಖ್ಯ ರಸ್ತೆ, 5ನೇ ಕ್ರಾಸ್, ಮಾರುತಿ ಬಡಾವಣೆ, ಶ್ರೀರಾಮಪುರಂ,
ಬೆಂಗಳೂರು– 21.

14. ಶ್ರೀ ಹೆಚ್.ಬಿ.ಉಮೇಶ್, (ಮೃತಿ) ಅವರ ವಾರಸುದಾರರು.

14. 1ಎ. ಶ್ರೀಮತಿ ಹೆಚ್.ಎಸ್.ಹರಿಣಿ, ಕೋಂ: ಲೇಟ್: ಹೆಚ್.ಬಿ.ಉಮೇಶ್,

1ಬಿ. ಶ್ರೀ ಕೀರ್ತಿ ಕಂದಾ, ಬಿನ್: ಲೇಟ್: ಹೆಚ್.ಬಿ.ಉಮೇಶ್,

1ಸಿ. ಶ್ರೀ ಚರಣ್, ಬಿನ್: ಲೇಟ್: ಹೆಚ್.ಬಿ.ಉಮೇಶ್,

ವಿಳಾಸ:
ನಂ.112, ಐ.ಸಿ.ಎಸ್.ಸಿ. ಮೇನ್ ರೋಡ್, ನಾಗರಭಾವಿ, ಬೆಂಗಳೂರು–72.

15. ಶ್ರೀ ನಾರಾಯಣ ಗೌಡ, ಮೇಜರ್, ಬಿನ್ ಪುಟ್ಟೇಗೌಡ,
ಮಾಜಿ ಅಧ್ಯಕ್ಷರು ಹಾಗೂ ಈಗಿನ ನಿರ್ದೇಶಕರು,
ಬಿಡಿ ಅಂಡ್ ಬಿಆರ್‌ಆರ್‌ಡಿಸಿಸಿ ಬ್ಯಾಂಕ್ ನಿ., ಕೆರೆಲಾಲುಸಂದ್ರ,
ಮಳಗಳು ಪೋಸ್ಟ್, ಕಸಬಾ ಹೋಬಳಿ, ಕನಕಪುರ ತಾಲ್ಲೂಕು,
ಬೆಂಗಳೂರು (ಗ್ರಾ) ಜಿಲ್ಲೆ.

16. ಶ್ರೀ ಎಸ್.ಜಿ.ಚೆಲುವಯ್ಯ, ಮೇಜರ್, ಮಾಜಿ ಉಪಾಧ್ಯಕ್ಷರು,
ಬಿಡಿ ಅಂಡ್ ಬಿಆರ್‌ಆರ್‌ಡಿಸಿಸಿ ಬ್ಯಾಂಕ್ ನಿ., ಸೊಂಡೆಕೊಪ್ಪ, ಸೊಂಡೆಕೊಪ್ಪ
ಪೋಸ್ಟ್, ನೆಲಮಂಗಲ ತಾ: ಬೆಂಗಳೂರು (ಗ್ರಾ) ಜಿಲ್ಲೆ.

17. ಶ್ರೀ ವಿ. ಚನ್ನಪ್ಪ, ಮೇಜರ್, ಮಾಜಿ ನಿರ್ದೇಶಕರು,
ಬಿಡಿ ಅಂಡ್ ಬಿಆರ್‌ಆರ್‌ಡಿಸಿಸಿ ಬ್ಯಾಂಕ್ ನಿ., ನೆರಳಘಟ್ಟ, ಅಣಬೆ ಪೋಸ್ಟ್,
ದೊಡ್ಡಬಳ್ಳಾಪುರ ತಾ: ಬೆಂಗಳೂರು (ಗ್ರಾ) ಜಿಲ್ಲೆ.

18. ಶ್ರೀ ಎ ನರಸಿಂಹಯ್ಯ, ಮೇಜರ್, ಮಾಜಿ ನಿರ್ದೇಶಕರು,
ಬಿಡಿ ಅಂಡ್ ಬಿಆರ್‌ಆರ್‌ಡಿಸಿಸಿ ಬ್ಯಾಂಕ್ ನಿ., ಗಂಟಿಗಾನಹಳ್ಳಿ ಪೋಸ್ಟ್,
ಕುರುವೇಗೆರೆ, ದೊಡ್ಡಬಳ್ಳಾಪುರ ತಾ: ಬೆಂಗಳೂರು (ಗ್ರಾ) ಜಿಲ್ಲೆ.

19. ಶ್ರೀ ಎನ್.ಎಸ್. ನರಸೇಗೌಡ, ಮೇಜರ್, ಮಾಜಿ ನಿರ್ದೇಶಕರು,
ಬಿಡಿ ಅಂಡ್ ಬಿಆರ್‌ಆರ್‌ಡಿಸಿಸಿ ಬ್ಯಾಂಕ್ ನಿ.,
ನಂ.692, 'ಎ' 8ನೇ ಮೇನ್, 3ನೇ ಸ್ಟೇಜ್, 3ನೇ ಬ್ಲಾಕ್,
ಬಸವೇಶ್ವರನಗರ, ಬೆಂಗಳೂರು–79.

20. ಶ್ರೀ ಬಿ.ರಾಮಿ ರೆಡ್ಡಿ, ಮೇಜರ್, ಮಾಜಿ ವ್ಯವಸ್ಥಾಪಕ ನಿರ್ದೇಶಕರು,
ಬಿಡಿ ಅಂಡ್ ಬಿಆರ್‌ಆರ್‌ಡಿಸಿಸಿ ಬ್ಯಾಂಕ್ ನಿ., ನಂ.124, 'ಎ' ಫ್ಲೋರ್, 26ನೇ
ಕ್ರಾಸ್, 6ನೇ ಬ್ಲಾಕ್, ಜಯನಗರ, ಬೆಂಗಳೂರು–20.

21. ಶ್ರೀ ಕೆ.ಟಿ.ವೆಂಕಟಸ್ವಾಮಿ, ಮೇಜರ್, ಮಾಜಿ ಶಾಖಾ ವ್ಯವಸ್ಥಾಪಕರು(ನಿವೃತ್ತ)
ಕೇಂದ್ರ ಕಛೇರಿ ಶಾಖೆ, ಬಿಡಿ ಅಂಡ್ ಬಿಆರ್‌ಆರ್‌ಡಿಸಿಸಿ ಬ್ಯಾಂಕ್ ನಿ., ನಂ.1013
ಇ, ಮೂಕಾಂಬಿಕ ಎ.ಆರ್. ಅವೆನ್ಯೂ, ನ್ಯೂ ತಿಪ್ಪಸಂದ್ರ, ಬೆಂಗಳೂರು–75.

22. ಶ್ರೀ ಎಂ.ಹೊನ್ನಲಿಂಗೇಗೌಡ, ಮೇಜರ್, ಮಾಜಿ ಶಾಖಾ ವ್ಯವಸ್ಥಾಪಕರು
ಬಿಡಿ ಅಂಡ್ ಬಿಆರ್‌ಆರ್‌ಡಿಸಿಸಿ ಬ್ಯಾಂಕ್ ನಿ., ಯಶವಂತಪುರ ಶಾಖೆ, ನಂ.
464, 10ನೇ ಇ ಮೇನ್ ರೋಡ್, 6ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು–
10.

23. ಶ್ರೀ ರಾಮಾಂಜನಪ್ಪ, ಮೇಜರ್, ಶಾಖಾ ಸೂಪರ್‌ವೈಸರ್,
(ಅಂಡರ್ ಸಸ್‌ಪೆನ್‌ಷನ್) ಬಿಡಿ ಅಂಡ್ ಬಿಆರ್‌ಆರ್‌ಡಿಸಿಸಿ ಬ್ಯಾಂಕ್ ನಿ.,
ಯಶವಂತಪುರ ಶಾಖೆ, ನಂ. 464, 10ನೇ ಇ ಮೇನ್ ರೋಡ್, 6ನೇ ಬ್ಲಾಕ್,
ರಾಜಾಜಿನಗರ, ಬೆಂಗಳೂರು–10.

24. ಶ್ರೀ ರಾಮಕೃಷ್ಣ, ಮೇಜರ್, ಶಾಖಾ ವ್ಯವಸ್ಥಾಪಕರು (ಅಂಡರ್ ಸಸ್‌ಪೆನ್‌ಷನ್) ಬಿಡಿ ಅಂಡ್ ಬಿಆರ್‌ಆರ್‌ಡಿಸಿಸಿ ಬ್ಯಾಂಕ್ ನಿ., (ಪ್ಲಾನಿಂಗ್ & ಡೆವಲಪ್‌ಮೆಂಟ್ ಶಾಖೆ) ನಂ.221, 5ನೇ ಕ್ರಾಸ್, 1ನೇ ಮೇನ್, 1ನೇ ಹಂತ, ಕೆ.ಹೆಚ್.ಬಿ. ಕಾಲೋನಿ., ಬಸವೇಶ್ವರನಗರ, ಬೆಂಗಳೂರು–79.

25. ಶ್ರೀ ರಂಗರಾಜು, ಜೂನಿಯರ್ ಅಸಿಸ್ಟೆಂಟ್, ಬಿಡಿ ಅಂಡ್ ಬಿಆರ್‌ಆರ್‌ಡಿಸಿಸಿ ಬ್ಯಾಂಕ್ ನಿ., ಯಶವಂತಪುರ ಶಾಖೆ ನಂ.466, 8ನೇ ಕ್ರಾಸ್, ಮಹಾಲಕ್ಷ್ಮೀ ಲೇಔಟ್, ಬೆಂಗಳೂರು–86.

26. ಶ್ರೀ ಎ.ಸಿ.ಲಕ್ಷ್ಮೀಕಾಂತ, ಕ್ಯಾಶಿಯರ್, ಬಿಡಿ ಅಂಡ್ ಬಿಆರ್‌ಆರ್‌ಡಿಸಿಸಿ ಬ್ಯಾಂಕ್ ನಿ., ಯಶವಂತಪುರ ಶಾಖೆ ನಂ.96, ಕಿರಣ್ ನಿಲಯ, 3ನೇ ಮೇನ್ ರೋಡ್, ಸರಸ್ವತಿ ಪುರ, ನಂದಿನಿ ಲೇಔಟ್, ಬೆಂಗಳೂರು–96.

27. ಶ್ರೀ ಹೆಚ್.ಎಲ್.ಶಿವಕುಮಾರ್, ಬಿನ್ ಲಕ್ಷ್ಮಣಗೌಡ, ಜೂನಿಯರ್ ಅಸಿಸ್ಟೆಂಟ್, ಬಿಡಿ ಅಂಡ್ ಬಿಆರ್‌ಆರ್‌ಡಿಸಿಸಿ ಬ್ಯಾಂಕ್ ನಿ., ಕೇಂದ್ರ ಕಛೇರಿ, ನಂ.32, 3ನೇ ಕ್ರಾಸ್, ವಿಠಲ್‌ನಗರ, ಚಾಮರಾಜಪೇಟೆ, ಬೆಂಗಳೂರು–18.

28. ಶ್ರೀ ಬಿ.ಎಸ್.ಆನಂತಮೂರ್ತಿ, ಪ್ರೋ : ಶ್ರೀಲಕ್ಷ್ಮೀ ಸಿಲ್ಕ್ ವೀವಿಂಗ್ ಫ್ಯಾಕ್ಟರಿ, ಶ್ರೀರಾಮಪುರಂ, ಬೆಂಗಳೂರು.

29. ಶ್ರೀ ಬಿ.ಎಸ್.ವೆಂಕಟೇಶ್, ನಂ.45/1, 11ನೇ ಕ್ರಾಸ್, 7ನೇ ಮೇನ್, ಶ್ರೀರಾಮಪುರಂ, ಬೆಂಗಳೂರು.

30. ಶ್ರೀ ಎಸ್.ಜಿ.ಗುಪ್ತಾ, ಕೇ : ನವಕರ್ನಾಟಕ ಕ್ರೆಡಿಟ್ ಕೋ–ಆಪರೇಟಿವ್ ಸೊಸೈಟಿ ಲಿ., ನಂ.31/2, 1ನೇ ಮುಖ್ಯ ರಸ್ತೆ, 5ನೇ ಕ್ರಾಸ್, ಮಾರುತಿ ಬಡಾವಣೆ, ಶ್ರೀರಾಮಪುರಂ, ಬೆಂಗಳೂರು– 21.

**"1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103 ರ ರೀತ್ಯಾ ಸ್ಥಿರಾಸ್ತಿಯನ್ನು ಆದೇಶಕ್ಕೆ ಮುನ್ನ ಜಪ್ತಿ ಮಾಡುವ ಸಲುವಾಗಿ ತಿಳುವಳಿಕೆ ನೋಟೀಸು"**

1. ವಾದಿಯು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 70 ರಡಿ ದಾವಾ ಅರ್ಜಿಯನ್ನು ಸಲ್ಲಿಸಿ 1 ರಿಂದ 30ನೇ ಪ್ರತಿವಾದಿಗಳಿಂದ ರೂ.4,36,78,537/– (ರೂ.ನಾಲ್ಕು ಕೋಟಿ ಮೂವತ್ತಾರು ಲಕ್ಷದ ಎಪ್ಪತ್ತೆಂಟು ಸಾವಿರ ಐದು ನೂರ ಮೂವತ್ತೇಳು ಮಾತ್ರ) ಗಳು ಹಾಗೂ ಈ ಮೊತ್ತಕ್ಕೆ ದಿನಾಂಕ:24–05–1996 ರಿಂದ ಸಾಲಿಯಾನ ಶೇ.22% ರಷ್ಟು ಬಡ್ಡಿ ದರದಂತೆ ಅಸಲು ಮತ್ತು ಬಡ್ಡಿ ವಸೂಲಾತಿಗಾಗಿ ದಾವೆಯನ್ನು ಹೂಡಿರುತ್ತಾರೆ. ಈ ದಾವೆಯನ್ನು ವಿಚಾರಣೆಗೆ ತೆಗೆದುಕೊಂಡು, ವಿಚಾರಣೆ ನಡೆಸಲಾಗುತ್ತಿದೆ. ಪ್ರಕರಣದ ವಿಚಾರಣಾ ಹಂತದಲ್ಲಿ ವಾದಿಯು ದಿನಾಂಕ:30–01–2012 ರಂದು ಪ್ರಮಾಣ ಪತ್ರದೊಂದಿಗೆ ಕಲಂ 103 ರಡಿ ಅರ್ಜಿಯನ್ನು ಸಲ್ಲಿಸಿ 17ನೇ ಪ್ರತಿವಾದಿಯ ಹೆಸರಿನಲ್ಲಿರುವ ಸ್ಥಿರಾಸ್ತಿಯನ್ನು ಆದೇಶ ಪೂರ್ವ ಜಪ್ತಿ ಆದೇಶ ಹೊರಡಿಸಬೇಕೆಂದು ಕೋರಿರುತ್ತಾರೆ.

2. ಅರ್ಜಿದಾರರು ಕಲಂ 103 ರ ಅರ್ಜಿ ಜೊತೆ ಸಲ್ಲಿಸಲಾಗಿರುವ ಪ್ರಮಾಣ ಪತ್ರದಲ್ಲಿ 1ನೇ ಪ್ರತಿವಾದಿ ಸಂಘದ ಆಡಳಿತ ಮಂಡಳಿಯನ್ನು ಸಹಕಾರ ಇಲಾಖೆಯು 1994ನೇ ಸಾಲಿನಲ್ಲಿ ರದ್ದು ಮಾಡಿರುತ್ತದೆ. ಈ ಆದೇಶವನ್ನು 1ನೇ ಪ್ರತಿವಾದಿ ಸಂಘವು ಗೌರವ ಉಚ್ಚ ನ್ಯಾಯಾಲಯದಲ್ಲಿ ಪ್ರಶ್ನಿಸಿದ್ದು, ರಿಟ್ ಅಫೀಲು ಸಂ.2218 ಮತ್ತು 2219 C/W/1991 ಹಾಗೂ 1992/1994 ಈ ರಿಟ್ ಅಫೀಲಿನನ್ವಯ ಗೌರವ ನ್ಯಾಯಾಲಯವು ಪ್ರತಿವಾದಿ 15 ರಿಂದ 19 ರವರುಗಳನ್ನು Government Nominees as Ad-Hoc Committee members to from bank administration till holding of new elelction on 02-12-1994 ಅದರನ್ವಯ ಸದರಿ ಅಡಾಕ್ ಕಮಿಟಿಯು ದಿನಾಂಕ:13–05–1994 ರವರೆಗೆ ಕಾರ್ಯನಿರ್ವಹಿಸಿರುತ್ತದೆ. ಈ ಅವಧಿಯಲ್ಲಿ 17ನೇ ಪ್ರತಿವಾದಿಯು ನಿರ್ದೇಶಕರಾಗಿ ಕಾರ್ಯನಿರ್ವಹಿಸಿ ಈ ಅವಧಿಯಲ್ಲಿ ಸಾಲಗಳನ್ನು ಮಂಜೂರು ಮಾಡಿರುತ್ತಾರೆ. ಆದರೆ ಅಡಾಕ್ ಕಮಿಟಿಯು ವಾದಿ ಸಂಘದಲ್ಲಿ ರೂ.4,00,00,000/–ಕ್ಕೆ ದಿನಾಂಕ:15–04–1995 ರಂದು ಅರ್ಜಿ ಸಲ್ಲಿಸಿ ಸಾಲವನ್ನು ಪಡೆದಿರುತ್ತಾರೆ. ಆದರೆ ಈ ಸಾಲ ಮಂಜೂರಾತಿಯಲ್ಲಿ ಅಡಾಕ್ ಕಮಿಟಿಯು ಗೌರವ ಉಚ್ಚ ನ್ಯಾಯಾಲಯದ ಆದೇಶ ಸಂಘದ ಬೈಲಾ ಮತ್ತು ಸಾಲಗಳ ನಿಯಮ ಮತ್ತು ನಿಬಂಧನೆಗಳ ಉಲ್ಲಂಘನೆ ಮಾಡಿ, ಅರ್ಜಿದಾರ ಬ್ಯಾಂಕಿಗೆ ಸುಳ್ಳು ಮಾಹಿತಿ ನೀಡಿ ಮೋಸ ಮಾಡಿರುತ್ತಾರೆ. ಆದರೆ ಪ್ರಸ್ತುತ 1ನೇ ಪ್ರತಿವಾದಿ ಸಂಘವು ತನ್ನ ಕಾರ್ಯಚಟುವಟಿಕೆ ನಡೆಸದೇ ಇರುವಂತಹ ಸ್ಥಿತಿಯನ್ನು ತಲುಪಿರುತ್ತದೆ. ಮುಂದೆಯು ಸಹ ಕಾರ್ಯಚಟುವಟಿಕೆಗಳನ್ನು ನಡೆಸುವ ಸಾಧ್ಯತೆ ಇಲ್ಲವೆಂದು ಮನಗಂಡು ಕಲಂ 70 ರಡಿಯಲ್ಲಿ ದಾವೆಯನ್ನು ಹೂಡಲಾಗಿದೆ. ಈ ಎಲ್ಲಾ ಅವ್ಯವಹಾರಕ್ಕೆ ಅಡಾಕ್ ಕಮಿಟಿಯ ಸದಸ್ಯರು ಮತ್ತು ಬ್ಯಾಂಕಿನ ನೌಕರರು ಒಳಗೂಡಿ ವೈಯಕ್ತಿಕವಾಗಿ ಮತ್ತು ಜಂಟಿಯಾಗಿ ಅವ್ಯವಹಾರ ನಡೆಸಿ ಅರ್ಜಿದಾರ ಬ್ಯಾಂಕಿನ ಸಾಲದ ಮೊತ್ತವನ್ನು ಉಪಯೋಗಿಸಿಕೊಂಡು ನಂತರ ಬ್ಯಾಂಕಿಗೆ ನಷ್ಟ ಉಂಟಾಗಲು ಕಾರಣ ಕರ್ತರಾಗಿರುತ್ತಾರೆ. ಈ ಹಿನ್ನಲೆಯಲ್ಲಿ ದಾವೆಗಳನ್ನು ಹೂಡಲಾಗಿದೆ. ಆದರೆ ಈ ದಾವೆ ಇತ್ಯರ್ಥವಾಗುವಲ್ಲಿ ಕಾನೂನು ರೀತ್ಯಾ ನಡವಳಿಕೆಗಳು ನಡೆಸಿ ಇತ್ಯರ್ಥಪಡಿಸುವಲ್ಲಿ ಸಮಯಾವಕಾಶ ತೆಗೆದುಕೊಳ್ಳುತ್ತಿದ್ದು, ಈ ಮಧ್ಯ ಪ್ರತಿವಾದಿಗಳು ತಮ್ಮ ಹೆಸರಿನಲ್ಲಿರುವ ಸ್ಥಿರಾಸ್ತಿಗಳನ್ನು ಮಾರಾಟ ಮಾಡುವ

ಸಾಧ್ಯತೆಗಳಿರುತ್ತವೆ. ಒಂದು ವೇಳೆ ಈ ರೀತಿ ಪ್ರತಿವಾದಿಗಳು ತಮ್ಮ ಹೆಸರಿನಲ್ಲಿರುವ ಸ್ಥಿರಾಸ್ತಿಗಳನ್ನು ಮಾರಾಟ ಮಾಡಿದ ಪಕ್ಷದಲ್ಲಿ ಈ ದಾವೆಯ ಅಂತಿಮ ಆದೇಶ ಅರ್ಜಿದಾರ ಬ್ಯಾಂಕಿನ ಪರವಾಗಿ ಬಂದರೂ ಸಹ ಅವಾರ್ಡ್ ಮೊತ್ತವನ್ನು ವಸೂಲಿ ಮಾಡಿಕೊಳ್ಳಲು ಸಾಧ್ಯವಾಗದ ಪರಿಸ್ಥಿತಿ ಉಂಟಾಗುವ ಸಾಧ್ಯತೆ ಇರುವುದರಿಂದ ಕಲಂ 103 ರಡಿಯಲ್ಲಿ ಸಲ್ಲಿಸಲಾಗಿರುವ ಅರ್ಜಿ ಆಧಾರಿತ 17ನೇ ಪ್ರತಿವಾದಿಗೆ ಸೇರಿದ ಸ್ಥಿರಾಸ್ತಿಗಳನ್ನು ಆದೇಶಕ್ಕೆ ಪೂರ್ವ ಜಪ್ತಿ ಆದೇಶ ಹೊರಡಿಸಬೇಕೆಂದು ಕೋರಿರುತ್ತಾರೆ.

3. ವಾದಿಯು ಕಲಂ 103 ರಡಿಯಲ್ಲಿ ಸಲ್ಲಿಸಿರುವ ಅರ್ಜಿಯಲ್ಲಿ ತಿಳಿಸಿರುವ ಸ್ಥಿರಾಸ್ತಿಗಳ ದಾಖಲಾತಿಗಳನ್ನು ಪರಿಶೀಲಿಸಲಾಗಿ ಈ ಸ್ಥಿರಾಸಿಯು 17ನೇ ಪ್ರತಿವಾದಿಯ ಹೆಸರಿಗೆ ಇರುವುದು ಕಂಡು ಬಂದಿರುತ್ತದೆ. ಈ ಸಂಬಂಧವಾಗಿ ವಾದಿಯು ಸಲ್ಲಿಸಲಾಗಿರುವ ಪ್ರಮಾಣ ಪತ್ರದಲ್ಲಿ ತಿಳಿಸಲಾಗಿರುವ ಅಂಶಗಳನ್ನು ಪರಿಶೀಲಿಸಲಾಗಿ 17ನೇ ಪ್ರತಿವಾದಿಯ ಹೆಸರಿಗೆ ಸೇರಿದ ಸ್ಥಿರಾಸ್ತಿಯನ್ನು ಕಲಂ 103 ರಡಿ ಜಪ್ತಿ ಮಾಡುವುದು ಅವಶ್ಯಕ ಮತ್ತು ಸೂಕ್ತವೆಂದು ಅಭಿಪ್ರಾಯ ಪಡುತ್ತಾ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**"ಆದೇಶ"**

ಮೇಲೆ ತಿಳಿಸಿರುವ ಅಂಶಗಳ ಹಿನ್ನಲೆಯಲ್ಲಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 70 ಮತ್ತು ಕಲಂ 103 ಹಾಗೂ ಸರ್ಕಾರದ ಅಧಿಸೂಚನೆ ಸಂ.ಸಿಓ/139/ಸಿಎಂಎಲ್/2010 ದಿನಾಂಕ:17–02–2011 ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ ಸಿ.ಎಸ್.ವಿರೇಶ್, ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ಆದ ನಾನು 17ನೇ ಪ್ರತಿವಾದಿಯ ಹೆಸರಿನಲ್ಲಿರುವ ಈ ಕೆಳಗಿನ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಷರತ್ತಿಗೊಳಪಟ್ಟು ಈ ಪ್ರಕರಣದ ಅಂತಿಮ ತೀರ್ಪಿಗೆ ಪೂರ್ವ ಜಪ್ತಿ ಆದೇಶ ಹೊರಡಿಸಿರುತ್ತೇನೆ.

17ನೇ ಪ್ರತಿವಾದಿಗಳು ಒಂದು ವೇಳೆ ಈ ಜಪ್ತಿ ಪೂರ್ವ ಆದೇಶದಲ್ಲಿ ತಿಳಿಸಿರುವ ಯಾವುದೇ ಸ್ಥಿರಾಸ್ತಿಯನ್ನು/ ಸ್ಥಿರಾಸ್ತಿಯ ಭಾಗವನ್ನು ಈ ಆದೇಶದಿಂದ ಮುಕ್ತ ಮಾಡಿಸಿಕೊಳ್ಳಲು ಇಚ್ಚಿಸಿದಲ್ಲಿ ಈ ದಾವಾ ಅರ್ಜಿಯಲ್ಲಿ ವಾದಿಯು ಕ್ಲೈಂ ಮಾಡಿರುವ ಮೊತ್ತ ರೂ.4,36,78,537/– (ರೂ.ನಾಲ್ಕು ಕೋಟಿ ಮೂವತ್ತಾರು ಲಕ್ಷದ ಎಪ್ಪತ್ತೆಂಟು ಸಾವಿರ ಐದು ನೂರ ಮೂವತ್ತೇಳು ಮಾತ್ರ) ಗಳನ್ನು ವಾದಿ ಬ್ಯಾಂಕಿನಲ್ಲಿ ಅಮಾನತ್ತು ಖಾತೆಗೆ ಈ ಆದೇಶ ಹೊರಡಿಸಿದ 30 ದಿವಸದೊಳಗಾಗಿ ಜಮಾ ಮಾಡಿ ಅಧಿಕೃತ ಚಲನ್/ರಸೀದಿಯನ್ನು ಹಾಜರುಪಡಿಸಿದಲ್ಲಿ ಈ ಆದೇಶದಲ್ಲಿ ತಿಳಿಸಿರುವ ಷೆಡ್ಯೂಲ್ ಸ್ವತ್ತನ್ನು ಮುಕ್ತಗೊಳಿಸುವ ಷರತ್ತಿಗೆ ಒಳಪಟ್ಟಿರುತ್ತದೆ.

ಒಂದು ವೇಳೆ 17ನೇ ಪ್ರತಿವಾದಿಯು ಮೇಲೆ ತಿಳಿಸಿರುವಂತೆ ಈ ಆದೇಶ ಹೊರಡಿಸಿದ 30 ದಿವಸಗಳೊಳಗಾಗಿ ಅವಶ್ಯಕವಿರುವ ನಗದು ಭದ್ರತೆಯನ್ನು ನೀಡಲು ವಿಫಲರಾದಲ್ಲಿ ಈ ಆದೇಶ ಪೂರ್ವ ಜಪ್ತಿ ಆದೇಶವನ್ನು ಸ್ಥಿರೀಕರಿಸಲಾಗುವುದು.

ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಖರೀದಿಸುವಲ್ಲಿ ಆಸಕ್ತಿ ಹೊಂದಿರುವ ಯಾವುದೇ ವ್ಯಕ್ತಿಗಳಿಗೆ ಈ ಆಸ್ತಿ ಪೂರ್ವ ಜಪ್ತಿ ಆದೇಶವು ಒಳಪಟ್ಟಿರುತ್ತದೆ.

**"ಷೆಡ್ಯೂಲ್ ಆಸ್ತಿ ವಿವರಗಳು"**

All that piece and parcel of the agricultural properties bearing Sy No.35/1B, measuring 3 Acres, Sy No.85, measuring 2 acres Sy No.35/1A1, measuring 05 Guntas, in total 05 acres 05 Guntas with commons boundaries, situated at Neralagatta Village, Kasaba Hobli, Doddaballapura Taluk, Bangalore Rural District and Bounded on.

| | |
|---|---|
| East by : | Property belongs to Devraju |
| West by : | Property belongs to Channakrishnaiah |
| North by : | Kere angala |
| South by : | Road |

ಈ ಆದೇಶವನ್ನು ನನ್ನ ಸಹಿ ಹಾಗೂ ಕಛೇರಿ ಮೊಹರು ನಿಶೆಯೊಂದಿಗೆ ಈ ದಿನ ಅಂದರೆ ದಿನಾಂಕ: 30–01–2012 ರಂದು ಹೊರಡಿಸಿರುತ್ತೇನೆ.

ಸಿ.ಎಸ್. ವೀರೇಶ್
ಸಹಕಾರ ಸಂಘಗಳ ಜಂಟಿ ನಿಬಂಧಕರು,
ಬೆಂಗಳೂರು ಪ್ರಾಂತ, ಬೆಂಗಳೂರು.

ಪಿ.ಆರ್. 169

